RNI No. KARKAN/2007/22111 ಸಂಪುಟ 12 ಸಂಚಿಕೆ 11 ಆಗಸ್ಟ್ 2018 ಬೆಲೆ ರೂ. 20/-



ಇಹಿಕ ಮತ್ತು ಪಾರತ್ರಿಕ ವಿಜಯದ ಹಾದಿ

# الصراط المستقيم
# ಸಿರಾತೇ ಮುಸ್ತಖೀಮ್

ಜಮೀಯತೇ ಅಹ್ಲೆ ಹದೀಸ್ ಕರ್ನಾಟಕ-ಗೋವಾ ಇದರ ಮುಖವಾಣಿ

ಸತ್ಯವಿಶ್ವಾಸಿಗಳ ಕೈಪಿಡಿ


















# الصراط المستقيم

ಐಹಿಕ ಮತ್ತು ಪಾರತ್ರಿಕ ವಿಜಯದ ಹಾದಿ

# ಸಿರಾತೇ ಮುಸ್ತಖೀಮ್

ಸತ್ಯವಿಶ್ವಾಸಿಗಳ ಕೈಪಿಡಿ

ಸಂಪುಟ 12 ಸಂಚಿಕೆ 11

ذو الحجة ١٤٣٩ هـ

**ಆಗಸ್ಟ್ 2018**



*ಮಾಲಕರು, ಮುದ್ರಕರು ಮತ್ತು ಪ್ರಕಾಶಕರು:*

**ಮುಹಮ್ಮದ್ ಅಲಿ**

ದಾವಾ ಪಬ್ಲಿಕೇಶನ್ಸ್,
ಹಿರಾ ಕಾಂಪ್ಲೆಕ್ಸ್,
ಡೋರ್ ನಂ. 2-184/11,
2 ನೇ ಬ್ಲಾಕ್, ಕಾಟಿಪಳ್ಳ ಪೋಸ್ಟ್,
ಮಂಗಳೂರು - 575 030

*ಸಂಪಾದಕರು:*

**ಪಿ. ಅಬ್ದುಸ್ಸಲಾಂ ಕಾಟಿಪಳ್ಳ**

Mob: 9986282449
Email: asshahadat@yahoo.co.in

*ಮುಖಪುಟ ವಿನ್ಯಾಸ:*

**ಎ.ಎಸ್ಕೆ.**

*ಮುದ್ರಣ:*

Akshara Printers,
2nd Block, Katipalla,
Mangaluru. D.K.


## ಒಳಪುಟಗಳಲ್ಲಿ

### ಸಂಪಾದಕೀಯ



### ಈ ಸಂಚಿಕೆಯಲ್ಲಿ



### ಸ್ಥಿರ ಶೀರ್ಷಿಕೆಗಳು




Printed, published & owned by Muhammad Ali, Dawa Publications, Hira Complex, 2-184/11, 2nd Block, Katipalla Post, Mangaluru - 575 030. Editor: P. Abdussalam, Printed at: Akshara Printers, 2nd Block, Katipalla Post, Mangaluru. D. K. KARNATAKA

ಸಂಪಾದಕೀಯ

بسم الله الرحمن الرحيم

الحَمْدُ للهِ رَبِّ العَالَمِينَ الصَّلاةُ وَالسَّلَامُ عَلَى أَفْضَلِ الأَنْبِيَاءِ وَالمُرْسَلِينَ
وَعَلَى آلِهِ وَصَحْبِهِ أَجْمَعِينَ أَمَّا بَعْدُ

# 1439 ಕೊನೆಗೊಳ್ಳುವಾಗ...!

ನಮ್ಮನ್ನು ಇಹಲೋಕದಿಂದ ದೂರಗೊಳಿಸಿ ಪರಲೋಕವನ್ನು ನಿಕಟಗೊಳಿಸಿ ಒಂದು ವರ್ಷ ನೇಪಥ್ಯಕ್ಕೆ ಸರಿದು ಹೋಯಿತು. ಹೊಸ ವರ್ಷವು ಆಗಮಿಸುತ್ತಿರುವಾಗ ಜನರು ಗತದ ಒಂದು ಪುನರಾವಲೋಕನ ಹಾಗೂ ಭವಿಷ್ಯದ ರೂಪುರೇಷೆಗಳನ್ನು ಸಿದ್ಧಪಡಿಸಿಟ್ಟುಕೊಳ್ಳಬೇಕಾಗಿದೆ. ತನ್ನ ಆಯುಷ್ಯದಲ್ಲಿ ಒಂದು ವರ್ಷ ಕಳೆದುಹೋಯಿತಲ್ಲ ಎಂದು ನಿರಾಶೆಪಡುವವರಿದ್ದಾರೆ. ತನಗೆ ವಿಧಿಸಿದ ಶಿಕ್ಷೆಯಲ್ಲಿ ಒಂದು ವರ್ಷ ಮುಗಿಯಿತಲ್ಲ ಎಂದು ಯೋಚಿಸಿ ಸಂತೋಷಪಡುವವರೂ ಇದ್ದಾರೆ.

ಸತ್ಯವಿಶ್ವಾಸಿ ಸಮಯವನ್ನು ಗಂಭೀರವಾಗಿ ಪರಿಗಣಿಸಬೇಕಾಗಿದೆ. ಚತುರ್ಥ ಖಲೀಫ ಅಲಿಯ್ಯ್ ಬಿನ್ ಅಬೀ ತ್ವಾಲಿಬ್ ಹೇಳಿದರು:

“ಇಹಲೋಕವು ನಮ್ಮಿಂದ ವಿದಾಯಕೋರುತ್ತದೆ. ಪರಲೋಕವು ನಮಗೆ ನಿಕಟವಾಗುತ್ತದೆ. ಇಹಲೋಕ ಮತ್ತು ಪರಲೋಕಕ್ಕೆ ಮಕ್ಕಳಿದ್ದಾರೆ. ನೀವು ಪರಲೋಕಕ್ಕಾಗಿ ಜೀವಿಸುವವರಾಗಿರಿ. ನೀವು ಇಹಲೋಕಕ್ಕಾಗಿ ಜೀವಿಸುವವರಾಗಬಾರದು. ಇಂದಿನ ದಿನವು ಕಾರ್ಯವೆಸಗಲು ಇರುವಂತದ್ದಾಗಿದೆ. ವಿಚಾರಣೆಯಿಲ್ಲ. ಆದರೆ ನಾಳೆ ವಿಚಾರಣೆಯ ದಿನವಾಗಿದೆ. ನಾಳೆ ಕಾರ್ಯವೆಸಗಲು ಸಾಧ್ಯವಿಲ್ಲ.”

## ಸತ್ಯವಿಶ್ವಾಸಿ ನಾಳೆಯ ಕುರಿತು ಯೋಚಿಸಬೇಕು:

ಅಲ್ಲಾಹನು ಹೇಳುತ್ತಾನೆ:

﴿يَوْمَ تَجِدُ كُلُّ نَفْسٍ مَّا عَمِلَتْ مِنْ خَيْرٍ مُّحْضَرًا وَمَا عَمِلَتْ مِن سُوٓءٍ تَوَدُّ لَوْ أَنَّ
بَيْنَهَا وَبَيْنَهُۥٓ أَمَدًۢا بَعِيدًا ۗ وَيُحَذِّرُكُمُ ٱللَّهُ نَفْسَهُۥ ۗ وَٱللَّهُ رَءُوفٌۢ بِٱلْعِبَادِ ﴿٣٠﴾﴾

"ಪುಣ್ಯ ಮಾಡಿರಲಿ, ಅಥವಾ ಪಾಪವೆಸಗಿರಲಿ, ಪ್ರತಿಯೊಬ್ಬನೂ ತನ್ನ ಕರ್ಮಫಲವನ್ನು ಪ್ರತ್ಯಕ್ಷ ಪಡೆಯುವ ಆ ದಿನ ಬರಲಿದೆ. ಅಂದು ಮಾನವನು ಅಕಟಾ! ಈ ದಿನವು ತನ್ನಿಂದ ಇನ್ನೂ ಬಹಳ ದೂರವಿರುತ್ತಿದ್ದರೆ! ಎಂದು ಆಶಿಸುವನು. ಅಲ್ಲಾಹನು ಸ್ವತಃ ತನ್ನ ಬಗ್ಗೆ (ಭಯಪಡಬೇಕೆಂದು) ನಿಮಗೆ ಎಚ್ಚರಿಕೆ ನೀಡುತ್ತಿದ್ದಾನೆ ಮತ್ತು ಅವನು ತನ್ನ ದಾಸರ ಕುರಿತು ಪರಮ ದಯಾಳುವಾಗಿರುತ್ತಾನೆ." (ಕುರ್‌ಆನ್ 3:30)

ಒಂದು ವರ್ಷ ಮುಗಿಯುವಾಗ ಪ್ರತಿಯೊಬ್ಬರೂ ನಾವು ಪರಲೋಕಕ್ಕಾಗಿ ಏನನ್ನು ಸಜ್ಜುಗೊಳಿಸಿಟ್ಟಿದ್ದೇವೆಂದು ಚಿಂತಿಸಬೇಕು. ಧರ್ಮ, ಸಮಾಜ, ಸಮುದಾಯಕ್ಕೆ ಸಹಾಯ ಮಾಡಲು ತನ್ನಿಂದ ಸಾಧ್ಯವಾಗಿದೆಯೇ?

ವರ್ತಕರು ಕ್ಲಪ್ತವಾಗಿ ಲಾಭ ನಷ್ಟಗಳ ಲೆಕ್ಕವನ್ನು ತೆಗೆದುಕೊಳ್ಳುತ್ತಾರೆ. ಅವರು ವರ್ಷ ಮುಕ್ತಾಯವಾಗುವಾಗ ಸೂಕ್ಷ್ಮವಾಗಿ ಪರಿಶೋಧಿಸುತ್ತಾರೆ. ನಷ್ಟಕ್ಕೆ ಕಾರಣವಾದ ಅಂಶಗಳನ್ನು ಪತ್ತೆಹಚ್ಚುತ್ತಾರೆ. ಲಾಭವನ್ನು ಹೆಚ್ಚಿಸಲು ಹೊಸ ಮಾರ್ಗಗಳನ್ನು ಹುಡುಕುತ್ತಾರೆ. ಆದರೆ ಮರಳಿ ಹೋಗುವ ಲೋಕದ ಜೀವನಕ್ಕಾಗಿ ಸಂಗ್ರಹಿಸಿಟ್ಟಿರುವ ಒಳಿತು-ಕೆಡುಕುಗಳ ಕುರಿತು ಲೆಕ್ಕ ತೆಗೆಯುವವರು ತುಂಬಾ ವಿರಳ.

## ನಾಳೆಗಾಗಿ ಏನು ಮಾಡಿದ್ದೇನೆ?

﴿يَٰٓأَيُّهَا ٱلَّذِينَ ءَامَنُواْ ٱتَّقُواْ ٱللَّهَ وَلۡتَنظُرۡ نَفۡسٞ مَّا قَدَّمَتۡ
لِغَدٖۖ وَٱتَّقُواْ ٱللَّهَۚ إِنَّ ٱللَّهَ خَبِيرُۢ بِمَا تَعۡمَلُونَ ١٨﴾

"ಸತ್ಯವಿಶ್ವಾಸಿಗಳೇ, ಅಲ್ಲಾಹನನ್ನು ಭಯಪಡಿರಿ ಮತ್ತು ಪ್ರತಿಯೊಬ್ಬನೂ ತಾನು ನಾಳೆಗಾಗಿ ಏನನ್ನು ಸಿದ್ಧಪಡಿಸಿದ್ದೇನೆಂಬುದನ್ನು ನೋಡಿಕೊಳ್ಳಲಿ. ಅಲ್ಲಾಹನನ್ನು ಭಯಪಡುತ್ತಲಿರಿ. ನಿಶ್ಚಯವಾಗಿಯೂ ನೀವು ಮಾಡುತ್ತಿರುವ ಸಕಲ ಕರ್ಮಗಳನ್ನು ಅಲ್ಲಾಹನು ಬಲ್ಲವನಾಗಿರುತ್ತಾನೆ." (ಕುರ್‌ಆನ್ 59:18)

ಸ್ವಯಂ ಪರಿಶೋಧನೆ ಅಗತ್ಯವಿದೆ. ಪರಿಶೋಧನೆಯಲ್ಲಿ ಸಂತೃಪ್ತರಾದರೆ ಮುಂದೆಯೂ ಉತ್ತಮ ರೀತಿಯಲ್ಲಿ ಜೀವಿಸಬೇಕು. ಸಂತೃಪ್ತರಾಗಿರದಿದ್ದರೆ ಪಶ್ಚಾತ್ತಾಪಪಟ್ಟು ಜೀವನವನ್ನು ಉತ್ತಮಪಡಿಸಬೇಕು.

﴿إِنَّ ٱلَّذِينَ ٱتَّقَوۡاْ إِذَا مَسَّهُمۡ طَٰٓئِفٞ مِّنَ ٱلشَّيۡطَٰنِ
تَذَكَّرُواْ فَإِذَا هُم مُّبۡصِرُونَ ٢٠١﴾

"ಧರ್ಮನಿಷ್ಠರಾದ ಶೈತಾನನ ಪ್ರಭಾವದಿಂದ ದುರಾಲೋಚನೆಗಳು ಸೋಕಿದರೂ ಅವರು ತಕ್ಷಣ ಜಾಗೃತರಾಗುತ್ತಾರೆ ಮತ್ತು ಅವರಿಗೆ ಸರಿಯಾದ ಕಾರ್ಯವಿಧಾನ ಯಾವುದೆಂದು ಸ್ಪಷ್ಟವಾಗಿ ತೋರುತ್ತದೆ." (7:201)

## ಸ್ವಯಂ ವಿಚಾರಣೆಗೆ ಗುರಿಪಡಿಸಿರಿ:

ಉಮರ್(ﷺ) ಹೇಳುತ್ತಾರೆ: "ನೀವು ವಿಚಾರಣೆಗೆ ಗುರಿಯಾಗುವುದಕ್ಕಿಂತ ಮೊದಲು ಸ್ವಯಂ ನೀವೇ ನಿಮ್ಮನ್ನು ವಿಚಾರಣೆಗೆ ಗುರಿಪಡಿಸಿರಿ. ನಿಮ್ಮ ಕಾರ್ಯಗಳನ್ನು ತಕ್ಕಡಿಯಲ್ಲಿಟ್ಟು ತೂಗಿ ನೋಡುವ ಮೊದಲು ನೀವೇ ಅದನ್ನು ಮಾಡಿರಿ."

ಅಲ್ಲಾಹನು ಹೇಳುತ್ತಾನೆ:



“ಅದು ನೀವು ಹಾಜರುಗೊಳಿಸಲ್ಪಡುವ ದಿನವಾಗಿರುವುದು. ನಿಮ್ಮ ಯಾವ ರಹಸ್ಯವೂ ಅಡಗಿರಲಾರದು.” (69:18)

ಇಬ್ನುಲ್ ಕಯ್ಯಿಂ(ﷺ) ಹೇಳುತ್ತಾರೆ: “ಲೆಕ್ಕ ಪರಿಶೋಧನೆಯೆಂದರೆ ಒಬ್ಬನು ತನಗೆ ಉತ್ತಮವಾದುದು ಹಾಗೂ ಕೇಡಾದುದನ್ನು ಬೇರ್ಪಡಿಸುವುದಾಗಿದೆ. ಉತ್ತಮವಾದುದನ್ನು ಸ್ವೀಕರಿಸಿ ಕೇಡಾದುದನ್ನು ತೊರೆಯಬೇಕು.”

ಆತ್ಮಪರಿಶೋಧನೆಯೊಂದಿಗೆ ಹೃದಯದ ವಾಚನವಾಗಿದೆ. ಹಾಗೆ ಮಾಡದಿರುವುದು ಆತ್ಮಹತ್ಯೆಗೆ ಸಮಾನವಾಗಿದೆ.

ಅಲ್ಲಾಹನು ಹೇಳುತ್ತಾನೆ:



“ನಿಮ್ಮನ್ನು ನೀವೇ ವಧಿಸಿಕೊಳ್ಳಬೇಡಿರಿ. ಅಲ್ಲಾಹನು ನಿಮ್ಮ ಮೇಲೆ ಕೃಪೆಯುಳ್ಳವನೆಂಬುದನ್ನು ಖಾತ್ರಿಯಾಗಿ ನಂಬಿರಿ.” (4:29)

ಇದಕ್ಕೆ ಇಬ್ನ್ ಕಸೀರ್ ನೀಡಿದ ಒಂದು ವಿವರಣೆ: “ನಿಷಿದ್ಧವಾದುದನ್ನು ಮಾಡಿಕೊಂಡು ಅನ್ಯಾಯವಾಗಿ ಸಂಪತ್ತನ್ನು ತಿನ್ನುವುದರ ಮೂಲಕ ನೀವು ನಿಮ್ಮನ್ನೇ ಕೊಲ್ಲದಿರಿ.”

ನಮಗೆ ಅಲ್ಲಾಹನು ದಯಪಾಲಿಸಿದ ಆಯುಷ್ಯ ಹರಾಮ್‌ಗಳನ್ನೆಸಗಿ ನಾಶಪಡಿಸುವುದಕ್ಕಿರುವುದಲ್ಲ. ಆತ್ಮಪರಿಶೋಧನೆ ಸ್ವಯಂ ಕುಂದುಕೊರತೆಗಳನ್ನು ತಿಳಿಯಲು ಸಹಾಯಕವಾಗಿದೆ. ಅದು ಅಹಂಕಾರವನ್ನು ದೂರಗೊಳಿಸುತ್ತದೆ. ಆತ್ಮಪರಿಶೋಧನೆ ನಮ್ಮ ಮನಸ್ಸನ್ನು ಶುದ್ಧಗೊಳಿಸುತ್ತದೆ.

ಅಲ್ಲಾಹನು ಹೇಳುತ್ತಾನೆ:



“ಖಂಡಿತವಾಗಿಯೂ ತನ್ನ ಆತ್ಮವನ್ನು ಸಂಸ್ಕರಿಸಿಕೊಂಡವನು ವಿಜಯಿಯಾದನು. ಮತ್ತು ಅದನ್ನು ದಮನಿಸಿದವನು ಸೋಲುಂಡನು.” (91:9-10)

ಬುದ್ಧಿವಂತರು ಯಾರು ಎಂಬ ಪ್ರಶ್ನೆಗೆ ಪ್ರವಾದಿ(ﷺ) ಯವರು ನೀಡಿದ ಉತ್ತರ ಹೀಗಿದೆ: “ಆತ್ಮಪರಿಶೋಧನೆ ನಡೆಸುವವರು ಹಾಗೂ ಮರಣಾನಂತರ ಜೀವನಕ್ಕಾಗಿ ಸತ್ಕರ್ಮಗಳನ್ನು ಅನುಷ್ಠಿಸುವವರು.”

## ಎಲ್ಲವನ್ನೂ ಬಹಿರಂಗಪಡಿಸುವ ದಿನ:



*07 ನೇ ಪುಟಕ್ಕೆ*

# مختصر صحيح البخاري

# ಮುಖ್ತಸರ್ ಸಹೀಹುಲ್ ಬುಖಾರಿ

**ಅಧ್ಯಾಯ 7**

## ಸುಗಂಧ ಹಚ್ಚಿಕೊಂಡು ಸ್ನಾನ ಮಾಡುವುದು

١٩٤ – عَنْ عَائِشَةَ رَضِيَ اللَّهُ عَنْهَا قَالَتْ: كَأَنِّي أَنْظُرُ إِلَى وَبِيصِ الطِّيبِ فِي مَفْرِقِ النَّبِيِّ صَلَّى اللَّهُ عَلَيْهِ وَسَلَّمَ وَهُوَ مُحْرِمٌ. [رواه البخاري ٢٧١]

194. ಆಯಿಶಾ(﵂) ವರದಿ ಮಾಡುತ್ತಾರೆ: “ಅಲ್ಲಾಹನ ಸಂದೇಶವಾಹಕರು ಇಹ್ರಾಮ್ ಕಟ್ಟುವ ಸಂದರ್ಭದಲ್ಲಿ ಅವರ ಹಣೆಯಲ್ಲಿ ಸುಗಂಧದ್ರವ್ಯದ ಹೊಳಪನ್ನು ಕಂಡೆ.”

**ಸಾರಾಂಶ :** ಶೀರ್ಷಿಕೆಗೆ ಅನುಗುಣವಾಗಿ ಪ್ರವಾದಿ(ﷺ) ಯವರು ಇಹ್ರಾಮ್‌ಗಾಗಿ ಸ್ನಾನ ಮಾಡಿದ್ದರೆಂದು ಸ್ನಾನಕ್ಕಿಂತ ಮೊದಲೇ ಸುಗಂಧ ದ್ರವ್ಯ ಹಚ್ಚಿಕೊಂಡಿದ್ದರೆಂದು ತಿಳಿದು ಬರುತ್ತದೆ.

**ಅಧ್ಯಾಯ 8**

## ಸ್ನಾನದ ಮಧ್ಯೆ ಕೂದಲಲ್ಲಿ ಬೆರಳಾಡಿಸುವುದು

١٩٥ – عَنْ عَائِشَةَ رَضِيَ اللَّهُ عَنْهَا قَالَتْ: كَانَ رَسُولُ اللَّهِ صَلَّى اللَّهُ عَلَيْهِ وَسَلَّمَ إِذَا اغْتَسَلَ مِنَ الْجَنَابَةِ غَسَلَ يَدَيْهِ وَتَوَضَّأَ وُضُوءَهُ لِلصَّلَاةِ، ثُمَّ اغْتَسَلَ ثُمَّ يُخَلِّلُ بِيَدِهِ شَعَرَهُ حَتَّى إِذَا ظَنَّ أَنَّهُ قَدْ أَرْوَى بَشَرَتَهُ أَفَاضَ عَلَيْهِ الْمَاءَ ثَلَاثَ مَرَّاتٍ ثُمَّ غَسَلَ سَائِرَ جَسَدِهِ. [رواه البخاري ٢٧٢]

195. ಆಯಿಶ(﵂) ರವರೇ ವರದಿ ಮಾಡಿದ ಹದೀಸಿನಲ್ಲಿ ಅವರು ಹೇಳುತ್ತಾರೆ. ಪ್ರವಾದಿ(ﷺ) ಯವರು ಜನಾಬತ್‌ನ ಸ್ನಾನ ಮಾಡುವ ಮೊದಲು ತನ್ನ ಎರಡೂ ಕೈಗಳನ್ನು ತೊಳೆದುಕೊಳ್ಳುತ್ತಿದ್ದರು. ಬಳಿಕ ನಮಾಝಿಗೆ ವುಝೂ ನಿರ್ವಹಿಸುತ್ತಿದ್ದರು. ನಂತರ ಎರಡೂ ಕೈಗಳ ಬೆರಳುಗಳನ್ನು ತಲೆಯ ಕೂದಲಿನ ಮಧ್ಯೆ ಅಲ್ಲಾಡಿಸುತ್ತಿದ್ದರು. ತಲೆಯ ಚರ್ಮವು ಒದ್ದೆಯಾಗಿದೆ ಎಂದು ಖಾತ್ರಿಯಾದ ನಂತರ ಮೂರು ಸಲ ನೀರು ಹರಿಸುತ್ತಿದ್ದರು. ಬಳಿಕ ತನ್ನ ದೇಹವನ್ನು ಶುಚಿಗೊಳಿಸುತ್ತಿದ್ದರು.

## ಅಧ್ಯಾಯ 9

## ಮಸೀದಿಗೆ ಬಂದ ನಂತರ ಜನಾಬತ್ತಿನ ಸ್ಥಿತಿಯಲ್ಲಿ ಇರುವ ಪ್ರಜ್ಞೆ ಉಂಟಾದರೆ ತಕ್ಷಣ ಹೊರಟುಹೋಗುವುದು. ತಯಮ್ಮುಮ್ ಮಾಡದಿರುವುದು

١٩٦- عَنْ أَبِي هُرَيْرَةَ رَضِيَ اللَّهُ عَنْهُ قَالَ: أُقِيمَتِ الصَّلَاةُ وَعُدِّلَتْ الصُّفُوفُ قِيَامًا. فَخَرَجَ إِلَيْنَا رَسُولُ اللَّهِ صَلَّى اللَّهُ عَلَيْهِ وَسَلَّمَ. فَلَمَّا قَامَ فِي مُصَلَّاهُ ذَكَرَ أَنَّهُ جُنُبٌ. فَقَالَ لَنَا: «مَكَانَكُمْ». ثُمَّ رَجَعَ فَاغْتَسَلَ ثُمَّ خَرَجَ إِلَيْنَا وَرَأْسُهُ يَقْطُرُ. فَكَبَّرَ فَصَلَّيْنَا مَعَهُ. [رواه البخاري ٢٧٥]

196. ಅಬೂ ಹುರೈರ(ﷺ) ವರದಿ. ಒಮ್ಮೆ ನಮಾಝಿಗಾಗಿ ತಕ್ಬೀರ್ (ಇಕಾಮತ್) ಹೇಳಲಾಯಿತು. ಪಂಕ್ತಿಗಳನ್ನು ಸರಿಪಡಿಸಲಾಯಿತು. ಪ್ರವಾದಿ(ﷺ) ಯವರು ಬಂದರು. ಮುಸಲ್ಲಾದಲ್ಲಿ ನಿಂತುಕೊಂಡರು. ಅಷ್ಟರಲ್ಲಿ ಅವರಿಗೆ ತಾನು ಅಶುದ್ಧಾವಸ್ಥೆಯಲ್ಲಿ (ಜನಾಬತ್) ಇರುವುದು ನೆನಪಾಯಿತು. ತಕ್ಷಣ ಅವರು ನಮ್ಮೊಂದಿಗೆ ನಿಂತಲ್ಲೇ ನಿಲ್ಲುವಂತೆ ಸೂಚಿಸುತ್ತಾ ಮನೆಗೆ ಮರಳಿದರು. ಬೇಗನೇ ಸ್ನಾನ ಮಾಡಿ ಮರಳಿಬಂದರು. ಅವರ ತಲೆಯಿಂದ ನೀರು ತೊಟ್ಟಿಕ್ಕುತ್ತಿತ್ತು. ಅವರು ನಮಾಝಿಗಾಗಿ ಅಲ್ಲಾಹು ಅಕ್ಬರ್ ಹೇಳಿದರು. ನಾವೆಲ್ಲರೂ ಅವರ ಹಿಂದೆ ನಿಂತು ನಮಾಝ್ ಮಾಡಿದೆವು.

**ಸಾರಾಂಶ :** ಈ ಹದೀಸಿನಿಂದ ಜನಾಬತ್ ಸ್ನಾನಕ್ಕೆ ತಡವಾದರೆ ಅಡ್ಡಿ ಇಲ್ಲವೆಂದೂ ನಮಾಝಿಗೆ ಮೊದಲು ಸ್ನಾನ ಕಡ್ಡಾಯವೆಂದೂ ತಿಳಿದು ಬರುತ್ತದೆ. ಅದೇ ಪ್ರಕಾರ ಅಝಾನ್ ಅಥವಾ ತಕ್ಬೀರ್‌ನ ನಂತರವೂ ಯಾವುದಾದರೂ ಸಕಾರಣವಿದ್ದರೆ ಮಸೀದಿಯಿಂದ ಹೊರಡಲು ಅಭ್ಯಂತರವಿಲ್ಲವೆಂದು ಇಲ್ಲಿ ವ್ಯಕ್ತವಾಗುತ್ತದೆ. (ಅಲ್‌ಅಝಾನ್ 639) ■

---

*05 ನೇ ಪುಟದಿಂದ*

## ಸಂಪಾದಕೀಯ

ٱلْكِتَٰبِ لَا يُغَادِرُ صَغِيرَةً وَلَا كَبِيرَةً إِلَّآ أَحْصَىٰهَاۚ وَوَجَدُوا۟ مَا عَمِلُوا۟ حَاضِرًاۗ وَلَا يَظْلِمُ رَبُّكَ أَحَدًا ﴿٤٩﴾

"ಕರ್ಮಪುಸ್ತಕವು ಮುಂದಿರಿಸಲ್ಪಡುವುದು. ಆಗ ಅಪರಾಧಿಗಳು ತಮ್ಮ ಜೀವನ ಗ್ರಂಥದಲ್ಲಿ ಅಡಕವಾಗಿರುವುದರ ಬಗ್ಗೆ ಭಯಭೀತರಾಗಿ ಅಯ್ಯೋ, ನಮ್ಮ ದುರ್ಗತಿಯೇ, ಇದೆಂತಹ ಗ್ರಂಥ? ನಮ್ಮ ಯಾವುದೇ ಚಿಕ್ಕ ಹಾಗೂ ದೊಡ್ಡ ಕೃತ್ಯವು ಇದರಲ್ಲಿ ಲಿಖಿತಗೊಳ್ಳದೆ ಬಿಟ್ಟು ಹೋಗಿಲ್ಲವಲ್ಲಾ ಎಂದು ಹೇಳುತ್ತಿರುವುದನ್ನು ನೀವು ಕಾಣುವಿರಿ. ಅವರು ಏನೆಲ್ಲ ಮಾಡಿದ್ದರೋ ಅವೆಲ್ಲವನ್ನೂ ತಮ್ಮ ಮುಂದೆ ಕಾಣುವರು ಮತ್ತು ನಿಮ್ಮ ಪ್ರಭು ಯಾರ ಮೇಲೂ ಕಿಂಚಿತ್ತೂ ಅಕ್ರಮವೆಸಗಲಾರನು." (18:49)

فَمَن يَعْمَلْ مِثْقَالَ ذَرَّةٍ خَيْرًا يَرَهُۥ ﴿٧﴾ وَمَن يَعْمَلْ مِثْقَالَ ذَرَّةٍ شَرًّا يَرَهُۥ ﴿٨﴾

"ಆಗ ಅಣುಗಾತ್ರದಲ್ಲಿ ಪುಣ್ಯ ಕಾರ್ಯವೆಸಗಿದವನು ಅದನ್ನು ಕಂಡೇ ತೀರುವನು ಮತ್ತು ಅಣುಗಾತ್ರದಲ್ಲಿ ಪಾಪ ಕಾರ್ಯವೆಸಗಿದವನು ಅದನ್ನು ಕಂಡೇ ತೀರುವನು." (99:7-8)

ಕಳೆದುಹೋದ ಸಮಯವು ಮರಳಿ ಲಭಿಸುವುದಿಲ್ಲ. ಅಲ್ಲಾಹನು ದಯಪಾಲಿಸಿದ ಅಮಾನತ್ತಾದ ಆಯುಷ್ಯವನ್ನು ಸತ್ಕರ್ಮಗಳಿಂದ ಸಾರ್ಥಕಗೊಳಿಸುವವರಿಗೆ ಯಶಸ್ಸು ನಿಶ್ಚಿತ. ಅಲ್ಲಾಹನು ಅನುಗ್ರಹಿಸಲಿ ಆಮೀನ್. ■

# ದುಲ್‌ಹಿಜ್ಜ—ಮೊದಲ ಹತ್ತು ದಿನಗಳ ಶ್ರೇಷ್ಠತೆಗಳು

ಈ ಹತ್ತು ದಿನರಾತ್ರಿಗಳು ಒಬ್ಬ ಮುಸಲ್ಮಾನನಿಗೆ ಸಂಬಂಧಿಸಿದಂತೆ ಅತ್ಯಧಿಕ ಪ್ರಾಮುಖ್ಯತೆಯನ್ನು ಹೊಂದಿರುವ ಅತಿ ಶ್ರೇಷ್ಠ ದಿನರಾತ್ರಿಗಳಾಗಿವೆ. ಈ ದಿನರಾತ್ರಿಗಳಲ್ಲಿ ಅಲ್ಲಾಹು(ﷻ) ಇಷ್ಟಪಡುವಂತಹ ಸತ್ಕರ್ಮಗಳನ್ನು ನಿರ್ವಹಿಸಿ ಅವನ ಸಾಮೀಪ್ಯವನ್ನು ಪಡೆಯಲು ಗರಿಷ್ಠ ಪ್ರಯತ್ನ ಮಾಡಬೇಕಾಗಿದೆ. ಅಲ್ಲಾಹು ನಮ್ಮೆಲ್ಲರಿಗೆ ಅಂತಹ ಸೌಭಾಗ್ಯವನ್ನು ಕರುಣಿಸಲಿ.

✍ ಅಬೂಬಕರ್ ಯೂಸುಫ್ ಅಲ್‌ಉವೈಸೀ

ಅಲ್ಲಾಹು(ﷻ) ಹೇಳುತ್ತಾನೆ:




“ಪ್ರಭಾತದ ಮೇಲಾಣೆ! ಹತ್ತು ರಾತ್ರಿಗಳ ಮೇಲಾಣೆ!” (ಕುರ್‌ಆನ್ 89:1–2)

ಇದನ್ನು ವಿವರಿಸುತ್ತಾ ಇಬ್ನ್ ಕಸೀರ್ ಹೇಳುತ್ತಾರೆ: “ಹತ್ತು ರಾತ್ರಿಗಳು ಎನ್ನುವುದರ ಉದ್ದೇಶ ದುಲ್‌ಹಿಜ್ಜ ತಿಂಗಳ ಮೊದಲ ಹತ್ತು ದಿನಗಳು. ಇಬ್ನ್ ಅಬ್ಬಾಸ್, ಇಬ್ನ್ ಸೀರೀನ್, ಮುಜಾಹಿದ್ ಮುಂತಾದವರು ಹೀಗೆಯೇ ಅಭಿಪ್ರಾಯಪಟ್ಟಿದ್ದಾರೆ.” (ತಫ್ಸೀರ್ ಇಬ್ನ್ ಕಸೀರ್ 5/214)

ಅಲ್ಲಾಹು(ﷻ) ಇಲ್ಲಿ ಈ ಹತ್ತು ದಿನಗಳ ಮೇಲೆ ಆಣೆ ಹಾಕುತ್ತಿದ್ದಾನೆ. ಅಲ್ಲಾಹನಿಗೆ ಅವನ ಸೃಷ್ಟಿಗಳಲ್ಲಿ ಯಾರ ಮೇಲೂ, ಯಾವುದರ ಮೇಲೂ ಆಣೆ ಹಾಕುವ ಅಧಿಕಾರವಿದೆ. ಆದರೆ ಅತ್ಯಧಿಕ ಪ್ರಾಮುಖ್ಯತೆಯಿರುವ ಮಹಾ ವಸ್ತುವಿನ ಮೇಲಲ್ಲದೆ ಅವನು ಆಣೆ ಹಾಕುವುದಿಲ್ಲ. ಹೀಗೆ ಆಣೆ ಹಾಕಲು ಅವನಿಗೆ ಇತರ ಯಾರೂ ತಿಳಿದಿರದಂತಹ ದೃಷ್ಟಾಂತ ಮತ್ತು ಯುಕ್ತಿಯಿದೆ.

ಅಲ್ಲಾಹು(ﷻ) ಈ ಹತ್ತು ದಿನಗಳ ಮೇಲೆ ಆಣೆ ಹಾಕಿರುವುದರಿಂದ ಈ ಹತ್ತು ದಿನಗಳಿಗೆ ಇತರ ದಿನಗಳಿಗಿಂತ ಹೆಚ್ಚು ಪ್ರಾಮುಖ್ಯತೆ ಮತ್ತು ಶ್ರೇಷ್ಠತೆಯಿದೆಯೆಂದು ಇದರಿಂದ ಅರ್ಥ ಮಾಡಿಕೊಳ್ಳಬಹುದು. ಹಾಗೆಯೇ ಅವನದನ್ನು ‘ಅರಿಯಲ್ಪಟ್ಟ ತಿಂಗಳುಗಳ’ (ಅಲ್‌ಅ-ಶ್‌ಹುರುಲ್ ಮಅ್‌ಲೂಮಾತ್) ಅಂದರೆ ಹಜ್ಜ್ ತಿಂಗಳುಗಳ ಕೊನೆಯ ದಿನಗಳನ್ನಾಗಿಯೂ ಮಾಡಿದ್ದಾನೆ.

ಇಮಾಂ ಅಲ್‌ಬುಖಾರಿ ತಮ್ಮ ‘ಸಹೀಹ್’ನಲ್ಲಿ ಹೇಳುತ್ತಾರೆ: “ಅರಿಯಲ್ಪಟ್ಟ ತಿಂಗಳುಗಳು ಎಂದರೆ ಶವ್ವಾಲ್, ದುಲ್‌ಕಅ್‌ದ ಮತ್ತು ದುಲ್‌ಹಿಜ್ಜ ತಿಂಗಳ ಮೊದಲ ಹತ್ತು ದಿನಗಳು ಎಂದು ಇಬ್ನ್ ಉಮರ್(ﷺ) ಹೇಳಿದ್ದಾರೆ.”

## ಸುನ್ನತ್ತಿನಲ್ಲಿ

ಸುನ್ನತ್ತಿನಲ್ಲಿಯೂ ಕೂಡ ಇದರ ಶ್ರೇಷ್ಠತೆಗಳನ್ನು ವಿವರಿಸ-ಲಾಗಿದೆ. ಈ ಹತ್ತು ದಿನಗಳು ಅಲ್ಲಾಹು ಸೃಷ್ಟಿಸಿದ ಅತಿಶ್ರೇಷ್ಠ ದಿನಗಳೆಂದು ಹೇಳಲಾಗಿದೆ.

عَنْ جَابِرِ بْنِ عَبْـدِ اللَّهِ رَضِيَ اللَّهُ عَنْهُ أَنَّ رَسُـــولَ اللَّـــهِ صَلَّى اللَّـــهُ عَلَيْهِ وَسَـــلَّمَ قَالَ: «أَفْضَـــلُ أَيَّامِ

الدُّنْيَا أَيَّامُ الْعَشْـرِ».

ಜಾಬಿರ್(ﷺ) ರಿಂದ ವರದಿ. ಅಲ್ಲಾಹನ ಸಂದೇಶವಾಹಕರು (ﷺ) ಹೇಳಿದರು— "ಭೂಲೋಕದ ದಿನಗಳಲ್ಲಿ ಅತಿಶ್ರೇಷ್ಠವಾದುದು ದುಲ್‌ಹಿಜ್ಜ ತಿಂಗಳ ಮೊದಲ ಹತ್ತು ದಿನಗಳು." (ಇದನ್ನು ಅಲ್‌ಹೈಸಮೀ ತಮ್ಮ 'ಮಜ್ಮಉಝ್ಝವಾಇದ್'ನಲ್ಲಿ (4/17) ಉದ್ಧರಿಸಿ ಹಸನ್ ಎಂದಿದ್ದಾರೆ. ನೋಡಿ: ಸಹೀಹುಲ್ ಜಾಮಿಅ್ (1133) ಸಹೀಹುತ್ತರ್ಗೀಬ್ ವತ್ತರ್ಹೀಬ್ (1150))

ಈ ಹತ್ತು ದಿನಗಳು ಭೂಲೋಕದ ದಿನಗಳ ಪೈಕಿ ಅತಿಶ್ರೇಷ್ಠ ದಿನಗಳು ಏಕೆಂದರೆ ಈ ದಿನಗಳಲ್ಲಿ ಎಲ್ಲ ಪ್ರಮುಖ ಆರಾಧನೆಗಳು ಒಗ್ಗೂಡುತ್ತವೆ. ಹಾಫಿಝ್ ಇಬ್ನ್ ಹಜರ್(ﷺ) ತಮ್ಮ 'ಫತ್‌ಹುಲ್ ಬಾರಿ'ಯಲ್ಲಿ (2/576) ಹೇಳುತ್ತಾರೆ: "ಈ ದಿನಗಳಲ್ಲಿ ನಮಾಝ್, ಉಪವಾಸ, ದಾನಧರ್ಮ, ಹಜ್ಜ್ ಮುಂತಾದ ಪ್ರಮುಖ ಆರಾಧನೆಗಳು ಒಗ್ಗೂಡುತ್ತವೆ. ಇದು ಇತರ ಯಾವುದೇ ದಿನಗಳಲ್ಲೂ ಒಗ್ಗೂಡುವುದಿಲ್ಲ."

ಇಮಾಮ್ ಅಲ್‌ಬುಖಾರಿ(ﷺ) ವರದಿ ಮಾಡುತ್ತಾರೆ:

عَـنْ عَبْدِ اللَّهِ بْـنِ عَبَّاسٍ رَضِـيَ اللَّـهُ عَنْهُمَا أَنَّ النَّبِـيَّ صَلَّى اللَّهُ عَلَيْهِ وَسَـلَّمَ قَالَ: «مَـا مِنْ أَيَّامٍ الْعَمَـلُ الصَّالِـحُ فِيهَا أَحَـبُّ إِلَى اللَّهِ مِـنْ هَذِهِ الْأَيَّامِ». يَعْنِي أَيَّامَ الْعَشْـرِ. قَالُوا: يَا رَسُـولَ اللَّهِ! وَلَا الْجِهَـادُ فِي سَـبِيلِ اللَّهِ؟ قَـالَ: «وَلَا الْجِهَادُ فِي سَـبِيلِ اللَّهِ. إِلَّا رَجُـلٌ خَرَجَ بِنَفْسِـهِ وَمَالِهِ ثُمَّ لَـمْ يَرْجِعْ مِنْ ذَلِكَ بِشَـيْءٍ».

ಅಬ್ದುಲ್ಲಾಹ್ ಇಬ್ನ್ ಅಬ್ಬಾಸ್(ﷺ) ರಿಂದ ವರದಿ. ಪ್ರವಾದಿ(ﷺ) ಯವರು ಹೇಳುತ್ತಾರೆ: "ಈ ಹತ್ತು ದಿನಗಳಲ್ಲಿ ಮಾಡುವ ಸತ್ಕರ್ಮಗಳನ್ನು ಇಷ್ಟಪಡುವಷ್ಟು ಅಲ್ಲಾಹು ಇತರ ಯಾವುದೇ ದಿನಗಳಲ್ಲಿ ಮಾಡುವ ಸತ್ಕರ್ಮಗಳನ್ನು ಇಷ್ಟಪಡುವುದಿಲ್ಲ." ಆಗ ಸಹಾಬಾಗಳು ಕೇಳುತ್ತಾರೆ: "ಓ ಅಲ್ಲಾಹನ ಸಂದೇಶವಾಹಕರೇ! ಅಲ್ಲಾಹನ ಮಾರ್ಗದಲ್ಲಿ ಮಾಡುವ ಜಿಹಾದನ್ನೂ ಅವನು ಇಷ್ಟಪಡುವುದಿಲ್ಲವೇ?" ಪ್ರವಾದಿ(ﷺ) ಯವರು ಹೇಳುತ್ತಾರೆ:"ಅಲ್ಲಾಹನ ಮಾರ್ಗದಲ್ಲಿ ಮಾಡುವ ಜಿಹಾದನ್ನೂ ಅವನು ಇಷ್ಟಪಡುವುದಿಲ್ಲ. ಆದರೆ ಒಬ್ಬ ವ್ಯಕ್ತಿ ತನ್ನ ಶರೀರ ಮತ್ತು ಸಂಪತ್ತಿನೊಂದಿಗೆ ಯುದ್ಧಕ್ಕೆ ತೆರಳಿ ಅವೆರಡನ್ನೂ ಅಲ್ಲಿ ಕಳಕೊಂಡು ಮರಳುವುದಾದರೆ ಮಾತ್ರ." (ಅಲ್‌ಬುಖಾರಿ 969)

## ಈ ಹತ್ತು ದಿನಗಳ ಶ್ರೇಷ್ಠತೆಗಳು

ಅಲ್ಲಾಹು(ﷻ) ಆಣೆ ಹಾಕಿ ಹೇಳಿದ ಈ ಹತ್ತು ದಿನಗಳ ಮಹಾ ಶ್ರೇಷ್ಠತೆಗಳನ್ನು ನೋಡಿ.

1. ಅಲ್ಲಾಹು(ﷻ) ಈ ಹತ್ತು ದಿನಗಳ ಮೇಲೆ ಆಣೆ ಹಾಕಿದ್ದಾನೆ. ಅತಿ ಪ್ರಾಮುಖ್ಯತೆಯಿರುವ ಮಹಾ ವಸ್ತುಗಳ ಮೇಲಲ್ಲದೆ ಅವನು ಆಣೆ ಹಾಕುವುದಿಲ್ಲ.

2. ಅಲ್ಲಾಹು(ﷻ) ಸೃಷ್ಟಿಸಿದ ಭೂಲೋಕದ ದಿನಗಳಲ್ಲಿ ಅತಿ ಶ್ರೇಷ್ಠವಾದುದು ಈ ಹತ್ತು ದಿನಗಳು.

3. ಇದು ಅರಿಯಲ್ಪಟ್ಟ ತಿಂಗಳುಗಳಲ್ಲಿ ಸೇರಿದ ದಿನಗಳು.

4. ಇದು ಪವಿತ್ರ ತಿಂಗಳುಗಳಲ್ಲಿ ಸೇರಿದ ದಿನಗಳು.

5. ಈ ದಿನಗಳಲ್ಲಿ ಮಾಡುವ ಸತ್ಕರ್ಮಗಳು ಅಲ್ಲಾಹನಿಗೆ ಇತರ ದಿನಗಳಲ್ಲಿ ಮಾಡುವ ಸತ್ಕರ್ಮಗಳಿಗಿಂತಲೂ ಹೆಚ್ಚು ಪ್ರಿಯ.

6. ಅಲ್ಲಾಹನ ಮಾರ್ಗದಲ್ಲಿ ಯುದ್ಧ ಮಾಡುತ್ತಾ ಶರೀರ ಮತ್ತು ಸಂಪತ್ತನ್ನು ತ್ಯಾಗ ಮಾಡುವ ಮೂಲಕವಲ್ಲದೆ ಈ ದಿನಗಳಲ್ಲಿ ಮಾಡುವ ಸತ್ಕರ್ಮಗಳಿಗೆ ಸರಿಸಮಾನವಾದ ಸತ್ಕರ್ಮ ಮಾಡಲು ಯಾರಿಗೂ ಸಾಧ್ಯವಿಲ್ಲ.

7. ಇವು ಅಲ್ಲಾಹು(ﷻ) ಅತ್ಯಧಿಕ ಇಷ್ಟಪಡುವ ದಿನಗಳು.

8. ಇವು ಹಜ್ಜಿನ ದಿನಗಳು. ಯೌಮುತ್ತರ್ವಿಯ ಈ ದಿನಗಳಲ್ಲಿ ಬರುತ್ತದೆ.

9. ಸೂರ್ಯ ಉದಯವಾದ ದಿನಗಳ ಪೈಕಿ ಅತಿಶ್ರೇಷ್ಠ ದಿನವಾದ ಅರಫ ದಿನವು ಈ ದಿನಗಳಲ್ಲಿ ಬರುತ್ತದೆ. ಹಾಗೆಯೇ ಬಲಿದಿನ, ಈದ್ ಹಬ್ಬ ಈ ದಿನಗಳಲ್ಲೇ ಬರುತ್ತದೆ.

ಈ ಹತ್ತು ದಿನಗಳಿಗೆ ಇಷ್ಟೆಲ್ಲಾ ವೈಶಿಷ್ಟ್ಯಗಳು ಮತ್ತು ಶ್ರೇಷ್ಠತೆಗಳಿರುವುದರಿಂದ ಬುದ್ಧಿವಂತರು ಈ ದಿನಗಳಲ್ಲಿ ಅತಿಹೆಚ್ಚು ಸತ್ಕರ್ಮಗಳನ್ನು

ನಿರ್ವಹಿಸುವತ್ತ ಗಮನ ಹರಿಸಬೇಕಾದ ಅಗತ್ಯವಿದೆ. ತಮಗೆ ಸಾಧ್ಯ-ವಾಗುವಷ್ಟರ ಮಟ್ಟಿಗೆ ಈ ದಿನಗಳನ್ನು ಸದುಪಯೋಗಪಡಿಸ-ಬೇಕಾದ ಜರೂರತ್ತಿದೆ.

## ಯಾವುದು ಶ್ರೇಷ್ಠ? ದುಲ್‌ಹಿಜ್ಜ ತಿಂಗಳ ಮೊದಲ ಹತ್ತು ದಿನಗಳೋ? ಅಥವಾ ರಮದಾನ್ ತಿಂಗಳ ಕೊನೆಯ ಹತ್ತು ದಿನಗಳೋ?

ಶೈಖ್ ಮುಹಮ್ಮದ್ ರಸ್ಲಾನ್ ರವರು ಬರೆದ ‘ಅಫ್ದಲು ಅಯ್ಯಾಮಿ ದ್ದುನ್ಯಾ’ (ಭೂಲೋಕದ ಅತಿಶ್ರೇಷ್ಠ ದಿನಗಳು) ಎಂಬ ಲೇಖನವನ್ನು ಓದುವ ಅವಕಾಶ ನನಗೆ ಲಭಿಸಿತ್ತು. ಅದರಲ್ಲಿ ಅವರು ಇಬ್ನುಲ್ ಕಯ್ಯಿಮ್(ﷺ) ರವರ ಮಾತನ್ನು ಉದ್ಧರಿಸಿ ಹೀಗೆ ಹೇಳುತ್ತಾರೆ:

“ದುಲ್‌ಹಿಜ್ಜ ತಿಂಗಳ ಮೊದಲ ಹತ್ತು ದಿನಗಳ ಹಗಲುಗಳು ರಮದಾನ್ ತಿಂಗಳ ಕೊನೆಯ ಹತ್ತು ದಿನಗಳ ಹಗಲುಗಳಿಗಿಂತ ಶ್ರೇಷ್ಠ. ಹಾಗೆಯೇ ರಮದಾನ್ ತಿಂಗಳ ಕೊನೆಯ ಹತ್ತು ದಿನಗಳ ರಾತ್ರಿಗಳು ದುಲ್‌ಹಿಜ್ಜ ತಿಂಗಳ ಮೊದಲ ಹತ್ತು ದಿನಗಳ ರಾತ್ರಿಗ-ಳಿಗಿಂತಲೂ ಶ್ರೇಷ್ಠ.”

ಇವರ ಈ ಮಾತು ನನಗೆ ಬಹಳ ಇಷ್ಟವಾಯಿತು. ನಾನಿದನ್ನು ನನ್ನ ಲೇಖನಗಳಲ್ಲೂ, ಭಾಷಣಗಳಲ್ಲೂ ಹೇಳುತ್ತಿದ್ದೆ. ಆದರೆ ಒಂದಿನ ನಾನು ಹಾಫಿಝ್ ಇಬ್ನ್ ರಜಬ್(ﷺ) ರವರ ‘ಲತಾಇಫುಲ್ ಮಆರಿಫ್’ ಎಂಬ ಗ್ರಂಥವನ್ನು ಓದುತ್ತಿದ್ದೆ. ಅದರಲ್ಲಿ ಅವರು ಈ ವಿಷಯದಲ್ಲಿ ಅನೇಕ ಉಲಮಾಗಳಿಂದ ವರದಿ ಮಾಡಿ ಒತ್ತುಕೊಟ್ಟು ಹೇಳಿದ ಅಭಿಪ್ರಾಯವನ್ನು ಓದಿದಾಗ ಮುಹಮ್ಮದ್ ರಸ್ಲಾನ್ ರವರು ಇಬ್ನುಲ್ ಕಯ್ಯಿಮ್(ﷺ) ರಿಂದ ಉದ್ಧರಿಸಿದ ಈ ಅಭಿಪ್ರಾಯ ತಪ್ಪೆಂದು ನನಗೆ ಮನವರಿಕೆಯಾಯಿತು. ಈ ಅಭಿಪ್ರಾಯವನ್ನು ಅವರು ತಮ್ಮ ‘ಝಾದುಲ್ ಮಆದ್’ ಎಂಬ ಗ್ರಂಥದಲ್ಲಿ (1/57-60) ಉಲ್ಲೇಖಿಸಿ-ದ್ದರು. ಈ ಅಭಿಪ್ರಾಯದ ಬಗ್ಗೆ ಹಾಫಿಝ್ ಇಬ್ನ್ ರಜಬ್(ﷺ) ತಮ್ಮ ‘ಲತಾಇಫುಲ್ ಮಆರಿಫ್’ನಲ್ಲಿ (ಪುಟ 358) ಹೀಗೆ ಹೇಳುತ್ತಾರೆ:

“ಈ ಅಭಿಪ್ರಾಯ ಸರಿಯಲ್ಲ. ಈ ಬಗ್ಗೆ ಸರಿಯಾದ ಅಭಿಪ್ರಾಯವು ಇತ್ತೀಚಿನ ಉಲಮಾಗಳು ಅಭಿಪ್ರಾಯಪಟ್ಟಂತೆ ಹಗಲು ರಾತ್ರಿ ಸೇರಿದ ದುಲ್‌ಹಿಜ್ಜ ತಿಂಗಳ ಮೊದಲ ಹತ್ತು ದಿನಗಳು ಹಗಲು ರಾತ್ರಿ ಸೇರಿದ ರಮದಾನ್ ತಿಂಗಳ ಕೊನೆಯ ಹತ್ತು ದಿನಗಳಿಗಿಂತ ಶ್ರೇಷ್ಠವಾಗಿದೆ. ರಮದಾನ್ ತಿಂಗಳ ಕೊನೆಯ ಹತ್ತು ರಾತ್ರಿಗಳಲ್ಲಿ ಇತರ ಯಾವ ರಾತ್ರಿಗಳಿಗೂ ಸರಿಸಮವಾಗದ ಒಂದು ರಾತ್ರಿಯಿದ್ದರೂ ಸಹ ಈ ಶ್ರೇಷ್ಠತೆಯಲ್ಲಿ ಚ್ಯುತಿಯುಂಟಾಗದು. ಹೆಚ್ಚು ಬಲ್ಲವನು ಅಲ್ಲಾಹು.”

ಈ ಅಭಿಪ್ರಾಯವನ್ನು ಬಲಪಡಿಸುವ ಕೆಲವು ಕಾರಣಗಳನ್ನು ಹೀಗೆ ಪಟ್ಟಿ ಮಾಡಬಹುದು:

1. ಅಲ್ಲಾಹು ಈ ಹತ್ತು ದಿನಗಳ ಮೇಲೆ ಆಣೆ ಹಾಕಿ ಹತ್ತು ದಿನಗಳಿಗೂ ಶ್ರೇಷ್ಠತೆ ನೀಡಿದ್ದಾನೆ. ಆದರೆ ರಮದಾನ್ ತಿಂಗಳ ಕೊನೆಯ ಹತ್ತರಲ್ಲಿ ಒಂದು ರಾತ್ರಿಗೆ ಮಾತ್ರ ಶ್ರೇಷ್ಠತೆಯಿದೆ. ಆ ರಾತ್ರಿ ಯಾವುದೆಂದು ಗೊತ್ತಿಲ್ಲ. ಆದರೆ ಈ ಹತ್ತು ದಿನಗಳು ಯಾವುದೆಂದು ಸ್ಪಷ್ಟವಾಗಿ ತಿಳಿದು ಬಂದಿದೆ.

2. ರಮದಾನ್ ತಿಂಗಳ ಹತ್ತು ರಾತ್ರಿಗಳಲ್ಲಿ ಒಂದು ರಾತ್ರಿಯನ್ನು ಕಳಕೊಂಡರೂ ಆ ಶ್ರೇಷ್ಠ ರಾತ್ರಿ ಕಳೆದು ಹೋಗುವ ಭಯವಿದೆ. ಆದರೆ ಈ ಹತ್ತು ದಿನಗಳಲ್ಲಿ ಆ ಭಯವಿಲ್ಲ.

3. ಈ ಹತ್ತು ದಿನಗಳಲ್ಲಿ ಮಾಡುವ ಸತ್ಕರ್ಮಗಳಿಗೆ ಸರಿಸಮವಾದ ಸತ್ಕರ್ಮಗಳನ್ನು ಇನ್ನಾವುದೇ ದಿನಗಳಲ್ಲಿ ಮಾಡಲು ಸಾಧ್ಯ-ವಿಲ್ಲವೆಂದು ಪ್ರವಾದಿಯವರು(ﷺ) ಹೇಳಿದ್ದಾರೆ. ಹತ್ತು ದಿನಗಳು ಎಂದರೆ ಅದರಲ್ಲಿ ರಾತ್ರಿಗಳೂ ಒಳಪಡುತ್ತವೆ. ಈ ಕಾರಣದಿಂದಲೇ ಅಲ್ಲಾಹು ಆ ರಾತ್ರಿಗಳ ಮೇಲೆ ಆಣೆ ಹಾಕಿದ್ದಾನೆ.

4. ಈ ಹತ್ತು ದಿನಗಳಲ್ಲಿ ಯೌಮುತ್ತರ್ವಿಯ, ಯೌಮು ಅರಫ ಮತ್ತು ಯೌಮುಲ್ ಈದ್ ಎಂಬ ಮೂರು ಶ್ರೇಷ್ಠ ದಿನಗಳು ಬರುತ್ತವೆ. ಅರಫ ದಿನವು ಸೂರ್ಯ ಉದಯಿಸಿದ ದಿನಗಳಲ್ಲೇ ಅತಿಶ್ರೇಷ್ಠ ದಿನ. ಈ ದಿನಗಳಲ್ಲಿ ನಿರ್ವಹಿಸುವ ಹಜ್ಜಿನ ಬಗ್ಗೆ ಪ್ರವಾದಿ(ﷺ) ಯವರು ಹೀಗೆ ಹೇಳುತ್ತಾರೆ:

«مَنْ حَجَّ وَلَمْ يَرْفُثْ وَلَمْ يَفْسُقْ خَرَجَ مِنْ ذُنُوبِهِ كَيَوْمِ وَلَدَتْهُ أُمُّهُ».

“ಅಶ್ಲೀಲ ಕೃತ್ಯಗಳನ್ನೋ ದುಷ್ಕೃತ್ಯಗಳನ್ನೋ ಮಾಡದೆ ಯಾರಾದರೂ ಹಜ್ಜ್ ನಿರ್ವಹಿಸುವುದಾದರೆ ಅವರ ತಾಯಿ ಅವರನ್ನು ಹೆತ್ತ ದಿನದಂತೆ ಅವರು ತಮ್ಮ ಪಾಪಗಳಿಂದ ಹೊರ ಬರುತ್ತಾರೆ.” (ಅಲ್‌ಬುಖಾರಿ 1521 ಮುಸ್ಲಿಂ 1350)

ಒಬ್ಬ ವ್ಯಕ್ತಿ ಸರ್ವ ಪಾಪಗಳಿಂದ ಮುಕ್ತನಾಗಿ ತಾಯಿಯ ಗರ್ಭಾ-ಶಯದಿಂದ ಹೊರಬರುವಂತೆ ಪರಿಶುದ್ಧನಾಗುವುದು ಸಾವಿರ ತಿಂಗಳು ಆರಾಧನೆ ಮಾಡುವುದಕ್ಕಿಂತಲೂ ಶ್ರೇಷ್ಠವಾಗಿದೆ.

ಇವೆಲ್ಲವೂ ಈ ಹತ್ತು ದಿನಗಳಿಗೆ ಅಲ್ಲಾಹು ನೀಡಿದ ಶ್ರೇಷ್ಠತೆಗಳಾಗಿವೆ. ಈ ದಿನಗಳನ್ನು ಸದುಪಯೋಗಪಡಿಸಲು ಶಕ್ತಿಮೀರಿ ಪ್ರಯತ್ನಿಸುವುದು ಪ್ರತಿಯೊಬ್ಬ ಮುಸಲ್ಮಾನನ ಕರ್ತವ್ಯವಾಗಿದೆ. ಹೆಚ್ಚು ಬಲ್ಲವನು ಅಲ್ಲಾಹು.

**ಈ ದಿನಗಳಲ್ಲಿ ಮಾಡಬೇಕಾದ ಕರ್ಮಗಳು**

1. ಕಡ್ಡಾಯ ನಮಾಝ್‌ಗಳನ್ನು ಅವುಗಳ ಸಮಯದಲ್ಲೇ ಸರಿಯಾಗಿ ನಿರ್ವಹಿಸಲು ಆತುರಪಡುವುದು. ನಮಾಝ್ ಅತಿಶ್ರೇಷ್ಠ ಆರಾಧನೆ. ಏಳನೇ ಆಕಾಶದಲ್ಲಿ ಅದನ್ನು ಕಡ್ಡಾಯಗೊಳಿಸಲಾಗಿದೆ ಎನ್ನುವುದು ಅದರ ಶ್ರೇಷ್ಠತೆಗೆ ಪುರಾವೆಯಾಗಿ ಧಾರಾಳ ಸಾಕು. ಇತರ ಯಾವುದೇ ಆರಾಧನೆಗಳೂ ಏಳನೇ ಆಕಾಶದಲ್ಲಿ ಕಡ್ಡಾಯ ಮಾಡಲಾಗಿಲ್ಲ. ಇತರ ದಿನಗಳಲ್ಲೇ ಈ ಆರಾಧನೆಯನ್ನು ಸಮಯಕ್ಕೆ ಸರಿಯಾಗಿ ನಿರ್ವಹಿಸಿದರೆ ಅದಕ್ಕೆ ಸಿಗುವ ಪುಣ್ಯಗಳು ಎಷ್ಟೋ ಅಧಿಕವಾಗಿರುವಾಗ ಅಲ್ಲಾಹು ಇಷ್ಟಪಡುವ ಈ ಹತ್ತು ದಿನಗಳಲ್ಲಿ ಅವುಗಳಿಗೆ ಸಿಗುವ ಪುಣ್ಯ ಹೇಗಿರಬಹುದೆಂದು ಯೋಚಿಸಿ ನೋಡಿ.

2. ಸಾಮರ್ಥ್ಯವಿರುವವರು ಹಜ್ಜ್ ಮತ್ತು ಉಮ್ರಗಳನ್ನು ನಿರ್ವಹಿಸುವುದು. ಇವೆರಡು ಅಲ್ಲಾಹನಿಗೆ ನಮ್ಮನ್ನು ಸಮೀಪಗೊಳಿಸುವ ಅತಿಶ್ರೇಷ್ಠ ಆರಾಧನೆಗಳಾಗಿವೆ. ಇದರ ಶ್ರೇಷ್ಠತೆಯನ್ನು ತಿಳಿಯಲು ಪ್ರವಾದಿ(ﷺ) ಯವರ ಈ ಒಂದು ಮಾತನ್ನು ತೆಗೆದುಕೊಂಡರೆ ಧಾರಾಳ ಸಾಕಾಗಬಹುದು.

«الْعُمْـرَةُ إِلَـى الْعُمْـرَةِ كَفَّـارَةٌ لِمَـا بَيْنَهُمَا. وَالْحَـجُّ الْمَبْـرُورُ لَيْـسَ لَـهُ جَـزَاءٌ إِلَّا الْجَنَّةَ».

“ಎರಡು ಉಮ್ರಗಳು ಅವುಗಳ ನಡುವಿನ ಪಾಪಗಳನ್ನು ಅಳಿಸಿಹಾಕುತ್ತವೆ. ಸ್ವೀಕಾರಯೋಗ್ಯವಾದ ಹಜ್ಜಿಗೆ ಸ್ವರ್ಗವಲ್ಲದೆ ಬೇರೇನೂ ಪ್ರತಿಫಲವಿಲ್ಲ.” (ಅಲ್‌ಬುಖಾರಿ 1793 ಮುಸ್ಲಿಂ 1349)

«مَنْ حَـجَّ وَلَمْ يَرْفَـثْ وَلَمْ يَفْسُـقْ خَرَجَ مِنْ ذُنُوبِهِ كَيَـوْمٍ وَلَدَتْهُ أُمُّهُ».

“ಅಶ್ಲೀಲ ಕೃತ್ಯಗಳನ್ನೋ ದುಷ್ಕೃತ್ಯಗಳನ್ನೋ ಮಾಡದೆ ಯಾರಾದರೂ ಹಜ್ಜ್ ನಿರ್ವಹಿಸುವುದಾದರೆ ಅವರ ತಾಯಿ ಅವರನ್ನು ಹೆತ್ತ ದಿನದಂತೆ ಅವರು ತಮ್ಮ ಪಾಪಗಳಿಂದ ಹೊರ ಬರುತ್ತಾರೆ.” (ಅಲ್‌ಬುಖಾರಿ 1521 ಮುಸ್ಲಿಂ 1350)

ಇವೆಲ್ಲವೂ ಕೇವಲ ಹಜ್ಜಿನ ಶ್ರೇಷ್ಠತೆಗಳು. ಈ ಹಜ್ಜನ್ನು ಈ ಶ್ರೇಷ್ಠ ದಿನಗಳಲ್ಲಿ ನಿರ್ವಹಿಸುವಾಗ ಇವುಗಳ ಪುಣ್ಯ ಎಷ್ಟಿರಬಹುದು! ಹಜ್ಜ್ ನಿರ್ವಹಿಸಲು ಈ ದಿನಗಳಲ್ಲದೆ ಬೇರೆ ದಿನಗಳಿಲ್ಲ ಎನ್ನುವುದು ಕೂಡ ಸತ್ಯ.

3. ಸಾಧ್ಯವಿರುವವರು ಉಪವಾಸ ಆಚರಿಸುವುದು. ಉಪವಾಸ ಅಲ್ಲಾಹು(ﷻ) ಅತ್ಯಧಿಕ ಪ್ರೀತಿಸುವ ಅತಿಶ್ರೇಷ್ಠ ಆರಾಧನೆ. ಉಪವಾಸದ ಬಗ್ಗೆ ಅಲ್ಲಾಹು(ﷻ) ಹೇಳುತ್ತಾನೆ:

«يَتْرُكُ طَعَامَهُ وَشَـرَابَهُ وَشَـهْوَتَهُ مِـنْ أَجْلِي. الصِّيَـامُ لِـي وَأَنَـا أَجْـزِي بِـهِ. وَالْحَسَـنَةُ بِعَشْـرِ أَمْثَالِهَا».

“ಅವನು ನನಗೋಸ್ಕರ ಅವನ ಹಸಿವು, ದಾಹ ಮತ್ತು ಬಯಕೆಗಳನ್ನು ತ್ಯಾಗ ಮಾಡುತ್ತಾನೆ. ಉಪವಾಸ ನನಗಿರುವಂತದ್ದು. ಅದಕ್ಕೆ ನಾನೇ ಪ್ರತಿಫಲ ಕೊಡುತ್ತೇನೆ. ಸತ್ಕರ್ಮಗಳಿಗೆ ಹತ್ತು ಪಟ್ಟು ಪ್ರತಿಫಲವಿದೆ.” (ಅಲ್‌ಬುಖಾರಿ 1894 ಮುಸ್ಲಿಂ 1151)

ಅದರ ಪ್ರತಿಫಲವನ್ನು ನಾನೇ ಕೊಡುತ್ತೇನೆ ಎನ್ನುವ ಮೂಲಕ ಅಲ್ಲಾಹು(ﷻ) ಉಪವಾಸಕ್ಕೆ ಅತ್ಯಧಿಕ ಪ್ರಾಮುಖ್ಯತೆ ನೀಡಿದ್ದಾನೆ. ಇಂತಹ ಉಪವಾಸವನ್ನು ಅತಿಶ್ರೇಷ್ಠ ದಿನಗಳಲ್ಲಿ ನಿರ್ವಹಿಸುವಾಗ ಅದಕ್ಕಿರುವ ಪುಣ್ಯವನ್ನು ಊಹಿಸಲು ಸಾಧ್ಯವೇ?

ಈ ದಿನಗಳಲ್ಲಿ ಬರುವ ಅರಫ ದಿನದ ಉಪವಾಸದ ಬಗ್ಗೆ ಪ್ರವಾದಿ(ﷺ) ಯವರು ಹೇಳುವುದು ನೋಡಿ:

عَـنْ أَبِـي قَتَادَةَ رَضِـيَ اللَّـهُ عَنْهُ عَـنِ النَّبِيِّ صَلَّى اللَّـهُ عَلَيْهِ وَسَـلَّمَ قَـالَ: «صِيَـامُ يَوْمِ عَرَفَةَ أَحْتَسِـبُ عَلَى اللَّهِ أَنْ يُكَفِّرَ السَّـنَةَ الَّتِي قَبْلَهُ وَالَّتِـي بَعْدَهُ».

ಅಬೂ ಕತಾದ(ﷺ) ರಿಂದ ವರದಿ. ಪ್ರವಾದಿ(ﷺ) ಯವರು ಹೇಳುತ್ತಾರೆ: “ಅರಫ ದಿನದ ಉಪವಾಸ. ಇದರ ಮೂಲಕ ಅಲ್ಲಾಹು ಅದಕ್ಕಿಂತ ಹಿಂದಿನ ವರ್ಷ ಮತ್ತು ಅದರ ನಂತರದ ವರ್ಷದ ಪಾಪಗಳನ್ನು ಅಳಿಸುವನೆಂದು ನಾನು ನಿರೀಕ್ಷಿಸುತ್ತೇನೆ.” (ಮುಸ್ಲಿಂ 1162)

ಇನ್ನೊಂದು ವರದಿಯಲ್ಲಿ ಹೀಗಿದೆ:

«مَنْ صَامَ يَوْمَ عَرَفَةَ غَفَرَ اللَّهُ لَهُ سَنَةً أَمَامَهُ وَسَنَةً بَعْدَهُ».

“ಅರಫ ಉಪವಾಸ ಆಚರಿಸಿದವನಿಗೆ ಅಲ್ಲಾಹು ಅದರ ಮುಂದಿನ ಮತ್ತು ಹಿಂದಿನ ವರ್ಷದ ಪಾಪಗಳನ್ನು ಕ್ಷಮಿಸುವನು.” (ಇಬ್ನ್ ಮಾಜ 1731)

4. ರಾತ್ರಿ ನಮಾಝ್ ನಿರ್ವಹಿಸುವುದು. ರಾತ್ರಿ ನಮಾಝ್ ಅಲ್ಲಾಹನಿಗೆ ಹತ್ತಿರಗೊಳಿಸುವ ಅತಿಶ್ರೇಷ್ಠ ಆರಾಧನೆಯಾಗಿದೆ. ಅಲ್ಲಾಹು(ﷻ) ಹೇಳುತ್ತಾನೆ:

﴿تَتَجَافَىٰ جُنُوبُهُمْ عَنِ ٱلْمَضَاجِعِ يَدْعُونَ رَبَّهُمْ خَوْفًا وَطَمَعًا﴾

“ಅವರ ಪಾರ್ಶ್ವಗಳ ಹಾಸಿಗೆಗಳನ್ನು ಬಿಟ್ಟು ಅಗಲುವುವು. ಅವರು ಅವರ ರಬ್ಬಿನಲ್ಲಿ ಭಯ ಮತ್ತು ನಿರೀಕ್ಷೆಯನ್ನಿಟ್ಟು ಪ್ರಾರ್ಥಿಸುವರು.” (ಕುರ್‌ಆನ್ 32:16)

﴿وَبِٱلْأَسْحَارِ هُمْ يَسْتَغْفِرُونَ ١٨﴾

“ಸಹರಿಯ ಸಮಯದಲ್ಲಿ ಅವರು ಅಲ್ಲಾಹನಲ್ಲಿ ಕ್ಷಮೆ ಬೇಡುತ್ತಿರುವರು.” (ಕುರ್‌ಆನ್ 51:18)

ಪ್ರವಾದಿ(ﷺ) ಯವರು ಹೇಳುತ್ತಾರೆ:

«أَطْعِمُوا الطَّعَامَ وَأَفْشُوا السَّلَامَ وَصَلُّوا بِاللَّيْلِ وَالنَّاسُ نِيَامٌ تَدْخُلُوا الْجَنَّةَ بِسَلَامٍ».

“ಅನ್ನದಾನ ಮಾಡಿರಿ. ಸಲಾಮ್ ಹೇಳುವುದನ್ನು ವ್ಯಾಪಕಗೊಳಿಸಿರಿ. ಜನರು ನಿದ್ದೆ ಮಾಡುತ್ತಿರುವಾಗ ನಮಾಝ್ ಮಾಡಿರಿ. ಸುರಕ್ಷಿತವಾಗಿ ಸ್ವರ್ಗವನ್ನು ಪ್ರವೇಶಿಸುವಿರಿ.”

ರಮದಾನ್ ತಿಂಗಳ ಕೊನೆಯ ಹತ್ತು ರಾತ್ರಿಗಳನ್ನು ಬಿಟ್ಟರೆ ರಾತ್ರಿ ನಮಾಝ್ ಮಾಡಲು ಅತಿ ಶ್ರೇಷ್ಠವಾದ ರಾತ್ರಿಗಳು ಈ ಹತ್ತು ರಾತ್ರಿಗಳಾಗಿವೆ. ಇಮಾಂ ಅಶ್ಶಾಫಿಈಯಂತಹವರು ಈ ರಾತ್ರಿಗಳಲ್ಲಿ ರಾತ್ರಿ ನಮಾಝ್ ನಿರ್ವಹಿಸುವುದನ್ನು ಅಪೇಕ್ಷಣೀಯ ಎಂದಿದ್ದಾರೆ.

ಈ ಹತ್ತು ರಾತ್ರಿಗಳನ್ನು ಪ್ರವೇಶಿಸಿದರೆ ಸಈದ್ ಇಬ್ನ್ ಜುಬೈರ್ (ﷺ) ರವರು ಇಬಾದತ್ ಮಾಡುವುದರಲ್ಲಿ ಅತಿಯಾಗಿ ಪರಿಶ್ರಮ ಪಡುತ್ತಿದ್ದರು. ಅವರು ಹೇಳುತ್ತಿದ್ದರು: “ಈ ಹತ್ತು ರಾತ್ರಿಗಳಲ್ಲಿ ನಿಮ್ಮ ದೀಪಗಳನ್ನು ಆರಿಸಬೇಡಿ.” (ನೋಡಿ ಹಿಲ್ಯತುಲ್ ಔಲಿಯಾ 2/29)

5. ತಕ್ಬೀರ್ ಮತ್ತು ದಿಕ್ರ್‌ಗಳನ್ನು ಹೇಳುವುದು. ಅಲ್ಲಾಹು(ﷻ) ಹೇಳುತ್ತಾನೆ:

﴿وَيَذْكُرُوا۟ ٱسْمَ ٱللَّهِ فِىٓ أَيَّامٍ مَّعْلُومَٰتٍ﴾

“ನಿಗದಿತ ದಿನಗಳಲ್ಲಿ ಅಲ್ಲಾಹನ ನಾಮವನ್ನು ಸ್ಮರಿಸಲು.” (ಕುರ್‌ಆನ್ 22:28)

﴿وَلِتُكَبِّرُوا۟ ٱللَّهَ عَلَىٰ مَا هَدَىٰكُمْ﴾

“ನಿಮಗೆ ಸನ್ಮಾರ್ಗವನ್ನು ತೋರಿಸಿದ್ದಕ್ಕಾಗಿ ನೀವು ಅಲ್ಲಾಹನನ್ನು ಮಹತ್ವಪಡಿಸಲು.” (ಕುರ್‌ಆನ್ 2:185)

ಈಗಾಗಲೇ ಉದ್ಧರಿಸಿದ ಇಬ್ನ್ ಉಮರ್(ﷺ) ರವರ ಹದೀಸಿನಲ್ಲಿ ಹೀಗಿದೆ:

«فَأَكْثِرُوا فِيهِنَّ مِنَ التَّهْلِيلِ وَالتَّكْبِيرِ وَالتَّحْمِيدِ».

“ಆ ದಿನಗಳಲ್ಲಿ ತಹ್ಲೀಲ್, ತಕ್ಬೀರ್ ಮತ್ತು ತಹ್ಮೀದ್ ಹೇಳುವುದನ್ನು ಅಧಿಕಗೊಳಿಸಿರಿ.” (ಅಹ್ಮದ್ 2/75)

ಸಹೀಹುಲ್ ಬುಖಾರಿಯಲ್ಲಿರುವ ಒಂದು ಮುಅಲ್ಲಕ್ ಹದೀಸಿನಲ್ಲಿ ಹೀಗಿದೆ:

عَنِ ابْنِ عُمَـرَ وَأَبِي هُرَيْرَةَ رَضِـيَ اللَّهُ عَنْهُمَا أَنَّهُمَـا كَانَـا يَخْرُجَانِ إِلَى السُّـوقِ فِـي أَيَّامِ الْعَشْـرِ يُكَبِّرَانِ وَيُكَبِّرُ النَّـاسُ بِتَكْبِيرِهِمَا.

“ಇಬ್ನ್ ಉಮರ್(ﷺ) ಮತ್ತು ಅಬೂ ಹುರೈರ(ﷺ) ರವರು ಈ ಹತ್ತು ದಿನಗಳಲ್ಲಿ ಪೇಟೆಗೆ ಹೋಗಿ ಗಟ್ಟಿಯಾಗಿ ತಕ್ಬೀರ್ ಹೇಳುತ್ತಿದ್ದರು. ಆಗ ಜನರು ಕೂಡ ಇವರೊಂದಿಗೆ ತಕ್ಬೀರ್ ಹೇಳುತ್ತಿದ್ದರು.” (ಫತ್ಹುಲ್ ಬಾರಿ 2/563)

ಆದ್ದರಿಂದ ಮುಸಲ್ಮಾನರು ಈ ಹತ್ತು ದಿನಗಳಲ್ಲಿ ಒಂದು ಕ್ಷಣವನ್ನೂ ಹಾಳು ಮಾಡದೆ ದಿಕ್ರ್ ದುಆಗಳಲ್ಲಿ ನಿರತರಾಗಬೇಕು. ಸುಬ್‌ಹಾನಲ್ಲಾಹ್, ಅಲ್‌ಹಂದುಲಿಲ್ಲಾಹ್, ಲಾಇಲಾಹ ಇಲ್ಲಲ್ಲಾಹ್, ಅಲ್ಲಾಹು ಅಕ್ಬರ್, ಅಸ್ತಗ್ಫಿರುಲ್ಲಾಹ್ ಮುಂತಾದ ದಿಕ್ರ್‌ಗಳನ್ನು ಹೇಳುತ್ತಿರಬೇಕು. ವಿಶೇಷವಾಗಿ ಅರಫ ದಿನ ದಿಕ್ರ್ ದುಆಗಳಲ್ಲಿ ನಿರತರಾಗುವುದನ್ನು ಮರೆಯಬಾರದು. ಕಾರಣ ಪ್ರವಾದಿ(ﷺ) ಯವರು ಹೇಳುತ್ತಾರೆ:

«خَيْـرُ الدُّعَـاءِ يَـوْمُ عَرَفَـةَ. وَخَيْرُ مَـا قُلْتُهُ أَنَـا وَالنَّبِيُّـونَ قَبْلِي لَا إِلَـهَ إِلَّا اللَّـهُ وَحَدَهُ لَا شَـرِيكَ لَهُ لَهُ الْمُلْـكُ وَلَهُ الْحَمْـدُ وَهُوَ عَلَى كُلِّ شَـيْءٍ قَدِيرٌ».

“ಅತಿಶ್ರೇಷ್ಠ ದುಆ ಅರಫ ದಿನ ಮಾಡುವ ದುಆ ಆಗಿದೆ. ನಾನು ಮತ್ತು ನನಗಿಂತ ಮುಂಚಿನ ಪ್ರವಾದಿಗಳನ್ನು ಹೇಳಿದ ಅತ್ಯುತ್ತಮವಾದ ಮಾತು ಲಾಇಲಾಹ ಇಲ್ಲಲ್ಲಾಹು ವಹ್ದಹೂ ಲಾ ಶರೀಕ ಲಹೂ, ಲಹುಲ್ ಮುಲ್ಕು ವಲಹುಲ್ ಹಮ್ದು ವಹುವ ಅಲಾ ಕುಲ್ಲಿ ಶೈಇನ್ ಕದೀರ್.” (ಅತ್ತಿರ್ಮಿದಿ 3585)

6. ಸತ್ಕರ್ಮಗಳನ್ನು ಹೆಚ್ಚಿಸುವುದು. ಸುನ್ನತ್ ನಮಾಝ್, ದಾನಧರ್ಮ, ಕುರ್‌ಆನ್ ಪಾರಾಯಣ, ಒಳಿತನ್ನು ಆದೇಶಿಸುವುದು, ಕೆಡುಕನ್ನು ವಿರೋಧಿಸುವುದು, ಕುಟುಂಬ ಸಂಬಂಧ ಜೋಡಿಸುವುದು, ಪರಸ್ಪರ ಸಂಬಂಧ ಸುಧಾರಿಸುವುದು, ಮುಸ್ಲಿಮರ ಮಧ್ಯೆ ಸುಧಾರಣೆ ಮಾಡುವುದು ಮುಂತಾದ ಅಲ್ಲಾಹು ಇಷ್ಟಪಡುವ ಮತ್ತು ಅಲ್ಲಾಹನ ಕಡೆಗೆ ಹತ್ತಿರವಾಗಲು ಕಾರಣವಾಗುವ ಸತ್ಕರ್ಮಗಳನ್ನು ಹೆಚ್ಚಿಸಬೇಕು. ಅಲ್ಲಾಹು(ﷻ) ಹೇಳುತ್ತಾನೆ:

«مَنْ آذَى لِي وَلِيًّا آذَنْتُهُ بِالْحَـرْبِ. وَمَا تَقَرَّبَ إِلَيَّ عَبْدِي بِشَـيْءٍ أَحَـبُّ إِلَيَّ مِمَّـا افْتَرَضْتُهُ عَلَيْهِ. وَمَـا زَالَ يَتَقَـرَّبُ إِلَـيَّ بِالنَّوَافِلِ حَتَّى أُحِبَّهُ. فَإِذَا أَحْبَبْتُهُ كُنْتُ سَـمْعَهُ الَّذِي يَسْـمَعُ بِـهِ، وَبَصَرَهُ الَّـذِي يَبْصُرُ بِـهِ، وَرِجْلَـهُ الَّتِي يَمْشِـي بِهَا، وَيَـدَهُ الَّتِي يَبْطِـشُ بِهَا».

“ನನ್ನ ಮಿತ್ರರಿಗೆ ಕಿರುಕುಳ ಕೊಡುವವರೊಂದಿಗೆ ನಾನು ಯುದ್ಧವನ್ನು ಘೋಷಿಸಿದ್ದೇನೆ. ನಾನು ಕಡ್ಡಾಯಗೊಳಿಸಿದ ಕಾರ್ಯಗಳಲ್ಲದೆ ನಾನು ಇಷ್ಟಪಡುವ ಇನ್ನಿತರ ಯಾವುದೇ ಕಾರ್ಯಗಳ ಮೂಲಕವೂ ನನ್ನ ದಾಸ ನನಗೆ ಹತ್ತಿರವಾಗುವುದಿಲ್ಲ. ಅವನನ್ನು ನಾನು ಪ್ರೀತಿಸುವಂತಾಗುವ ತನಕ ಅವನು ಐಚ್ಛಿಕ ಕರ್ಮಗಳ ಮೂಲಕ ನನಗೆ ಹತ್ತಿರವಾಗುತ್ತಿರುವನು. ಹೀಗೆ ನಾನು ಅವನನ್ನು ಪ್ರೀತಿಸಿದರೆ ಅವನು ಕೇಳುವ ಅವನ ಶ್ರವಣ ನಾನಾಗುವೆನು. ಅವನು ಕಾಣುವ ಅವನ ದೃಷ್ಟಿ ನಾನಾಗುವೆನು. ಅವನು ನಡೆಯುವ ಅವನ ಕಾಲು ನಾನಾಗುವೆನು. ಅವನು ಹಿಡಿಯುವ ಅವನ ಕೈ ನಾನಾಗುವೆನು.” (ಅಲ್‌ಬುಖಾರಿ)

7. ಸಾಮರ್ಥ್ಯವಿರುವವರು ಉದ್‌ಹಿಯತ್ ನಿರ್ವಹಿಸಲು ಮುಂದಾಗುವುದು. ಉದ್‌ಹಿಯತ್ತನ್ನು ಬಲಿದಾನದ ದಿನದಂದು, ಅಂದರೆ ದುಲ್‌ಹಿಜ್ಜ ತಿಂಗಳ ಹತ್ತರಂದು ನಿರ್ವಹಿಸಬೇಕಾಗಿದೆ. ಅಂದರೆ ಈದ್ ದಿನದಂದು. ಅಲ್ಲಾಹನಿಗೆ ಹತ್ತಿರವಾಗಲು ಬಯಸುವ ಎಲ್ಲರೂ ಅಂದು ತಮ್ಮ ಸಾಮರ್ಥ್ಯಕ್ಕೆ ತಕ್ಕಂತೆ ಉದ್‌ಹಿಯತ್ ಬಲಿ ನೀಡಿ ಅದರ ರಕ್ತವನ್ನು

ಅಲ್ಲಾಹನ ಮಾರ್ಗದಲ್ಲಿ ಹರಿಸಬೇಕು. ಉದ್‌ಹಿಯತ್ತಿನ ಮೃಗ ಅತ್ಯುತ್ತಮವೂ, ಅಮೂಲ್ಯವೂ ಆಗಿದೆಯೆಂಬುದನ್ನು ಖಾತ್ರಿ ಪಡಿಸಬೇಕು. ಅಲ್ಲಾಹು ಆದೇಶಿಸುತ್ತಾನೆ:



"(ಓ ಪ್ರವಾದಿಯವರೇ) ನಾನು ತಮಗೆ ಅಲ್‌ಕೌಸರನ್ನು ನೀಡಿದ್ದೇವೆ. ಆದ್ದರಿಂದ ತಾವು ತಮ್ಮ ರಬ್ಬಿಗೆ ನಮಾಝ್ ಮಾಡಿರಿ ಮತ್ತು ಬಲಿ ನೀಡಿರಿ." (ಕುರ್‌ಆನ್ 108:1–2)

ಈ ಆದೇಶವನ್ನು ಪಾಲಿಸುತ್ತಾ ಪ್ರವಾದಿಯವರು(ﷺ) ಎರಡು ಕೊಬ್ಬಿದ, ಕೊಂಬುಗಳಿರುವ ಟಗರುಗಳನ್ನು ಬಲಿ ನೀಡಿದರು. ಅವರು ಅಲ್ಲಾಹನ ಹೆಸರು ಹೇಳಿ ತಕ್ಬೀರ್ ಉಚ್ಚರಿಸುತ್ತಾ ಅವುಗಳನ್ನು ತನ್ನ ಕೈಯಿಂದಲೇ ದಬಹ್ ಮಾಡಿದರು. (ಅಲ್‌ಬುಖಾರಿ 5565)

ಉದ್‌ಹಿಯತ್ ನೀಡುವ ಸಾಮರ್ಥ್ಯವಿದ್ದೂ ನೀಡದವರ ಬಗ್ಗೆ ಅವರು ಖಾರವಾಗಿ ಹೇಳಿದರು:

«مَـــنْ كَانَ لَـــهُ سِـــعَةٌ وَلَـــمْ يَضَـــحِّ فَـــلَا يَقْرَبَـــنَّ مُصَلَّانَـــا».

"ಉದ್‌ಹಿಯತ್ ನೀಡುವ ಶಕ್ತಿಯಿದ್ದೂ ನೀಡದವನು ನಮ್ಮ ಈದ್ಗಾಹ್‌ಗೆ ಬರಬೇಕಾದ ಅಗತ್ಯವಿಲ್ಲ."

ಉದ್‌ಹಿಯತ್ ನೀಡುವುದು ಎಷ್ಟು ದೊಡ್ಡ ಸತ್ಕರ್ಮವೆಂದು ಇದರಿಂದ ಅರ್ಥ ಮಾಡಿಕೊಳ್ಳಬಹುದು. ಉದ್‌ಹಿಯತ್ ನೀಡುವುದಕ್ಕಾಗಿ ಆತುರಪಡಲು ಮುಸಲ್ಮಾನರಿಗೆ ಈ ಒಂದು ಹದೀಸ್ ಧಾರಾಳ ಸಾಕು.

ನಮಗೆ ಐಶ್ವರ್ಯವನ್ನು ನೀಡಿದವನು ಅಲ್ಲಾಹು. ಆ ಐಶ್ವರ್ಯದಿಂದ ಒಂದು ಸಣ್ಣ ಭಾಗವನ್ನು ವ್ಯಯಿಸಿ ಒಂದು ಆಡನ್ನು ಖರೀದಿಸಿ ತನ್ನ ಮಾರ್ಗದಲ್ಲಿ ಉದ್‌ಹಿಯತ್ ಮಾಡಲು ಅಲ್ಲಾಹು ಹೇಳುತ್ತಾನೆ. ಇದಕ್ಕೆ ತಾನು ಅತ್ಯುತ್ತಮವಾದ ಪ್ರತಿಫಲ ನೀಡುತ್ತೇನೆಂದೂ ವಾಗ್ದಾನ ಮಾಡುತ್ತಾನೆ.

ಅಲ್ಲಾಹು ದೊಡ್ಡವನು. ಅವನು ದಯಪಾಲಿಸಿದ ಸಂಪತ್ತಿನ ಒಂದು ಭಾಗವನ್ನು ಅವನ ಮಾರ್ಗದಲ್ಲಿ ವ್ಯಯಿಸಲು ಅವನು ಹೇಳುವಾಗ ಅದಕ್ಕೆ ನಾವು ಸಿದ್ಧವಾಗದಿದ್ದರೆ ನಮಗಿಂತಲೂ ದೊಡ್ಡ ದ್ರೋಹಿ ಇನ್ನಾರು? ಅಲ್ಲಾಹು ಕಾಪಾಡಲಿ. ಅಲ್ಲಾಹು ಹೇಳುವುದು ನೋಡಿ:



"ಅಲ್ಲಾಹು ವಿಶ್ವಾಸಿಗಳಿಂದ ಅವರ ಶರೀರಗಳನ್ನೂ ಸಂಪತ್ತನ್ನೂ ಖರೀದಿಸುತ್ತಾನೆ, ಅವರಿಗೆ ಬದಲಿಯಾಗಿ ಸ್ವರ್ಗ ನೀಡುತ್ತೇನೆಂಬ ಷರತ್ತಿನೊಂದಿಗೆ." (ಕುರ್‌ಆನ್ 9:111)

ನಮಗೆ ಶರೀರ ಮತ್ತು ಸಂಪತ್ತನ್ನು ಕೊಟ್ಟವನು ಅಲ್ಲಾಹು. ಅದನ್ನು ಅವನು ನಮ್ಮೊಂದಿಗೆ ಕೇಳುತ್ತಾನೆ. ಆಗ ಅದನ್ನು ಅವನಿಗೆ ಅರ್ಪಿಸಲು ನಾವು ಸಿದ್ಧರಾಗಬೇಕು.

ಇನ್ನು ಅವನು ಅದನ್ನು ಕೇಳುವುದು ಸುಮ್ಮನೆಯಲ್ಲ, ಬದಲಾಗಿ ನಮಗೆ ಸ್ವರ್ಗವನ್ನು ಕೊಡುತ್ತೇನೆಂಬ ಷರತ್ತಿನೊಂದಿಗೆ. ಸ್ವರ್ಗ ಎಂದರೆ ಕಣ್ಣುಗಳು ಕಾಣದ, ಕಿವಿಗಳು ಕೇಳದ, ಮನಸ್ಸಿನಲ್ಲಿ ಊಹಿಸಲು ಸಾಧ್ಯವಾಗದಂತಹ ಸುಖಭೋಗಗಳು ತುಂಬಿ ತುಳುಕುತ್ತಿರುವ ಲೋಕ!

8. ಕೂದಲು ಮತ್ತು ಉಗುರು ಕತ್ತರಿಸದಿರುವುದು. ಇದು ಈ ಹತ್ತು ದಿನಗಳಲ್ಲಿ ಮಾತ್ರವಿರುವ ಒಂದು ವಿಶೇಷ ಆರಾಧನೆ. ಉದ್‌ಹಿಯತ್ ಮಾಡಲು ಉದ್ದೇಶಿಸುವ ಎಲ್ಲರಿಗೂ ಇದು ಅನ್ವಯವಾಗುತ್ತದೆ. ಪ್ರವಾದಿ(ﷺ) ಯವರು ಹೇಳುತ್ತಾರೆ:

«إِذَا رَأَيْتُمْ هِلَالَ ذِي الْحِجَّـــةِ وَأَرَادَ أَحَدُكُمْ أَنْ يُضَحِّيَ فَلْيُمْسِكْ عَنْ شَـــعْرِهِ وَأَظْفَارِهِ».

"ನೀವು ದುಲ್‌ಹಿಜ್ಜ ತಿಂಗಳ ಚಂದ್ರನನ್ನು ಕಂಡು ನಿಮ್ಮಲ್ಲೊಬ್ಬರು ಉದ್‌ಹಿಯತ್ ಮಾಡಲು ಉದ್ದೇಶಿಸುವುದಾದರೆ ಅವರು ತಮ್ಮ ಕೂದಲು ಮತ್ತು ಉಗುರುಗಳನ್ನು ಕತ್ತರಿಸಬಾರದು." (ಮುಸ್ಲಿಂ 5224)

ಇನ್ನೊಂದು ವರದಿಯಲ್ಲಿ:

«فَلَا يَأْخُذْ مِنْ شَعْرِهِ وَلَا مِنْ أَظْفَارِهِ حَتَّى يُضَحِّيَ».

"ಉದ್‌ಹಿಯತ್ ನಿರ್ವಹಿಸುವ ತನಕ ತಮ್ಮ ಕೂದಲು ಮತ್ತು ಉಗುರುಗಳನ್ನು ಕತ್ತರಿಸಬಾರದು."

ಈ ಆದೇಶ ಉದ್‌ಹಿಯತ್ ಮಾಡಲು ಉದ್ದೇಶಿಸಿದ ಮನೆಯ ಯಜಮಾನನಿಗೆ ಮಾತ್ರ ಸೀಮಿತವೇ? ಅಥವಾ ಮನೆಯ ಎಲ್ಲ ಸದಸ್ಯರಿಗೂ ಅನ್ವಯವೇ? ಎಂಬ ವಿಷಯದಲ್ಲಿ ವಿದ್ವಾಂಸರಿಗೆ ಭಿನ್ನಾಭಿಪ್ರಾಯವಿದೆ.

9. ಈದ್ ದಿನ ನಮಾಝ್ ನಿರ್ವಹಿಸಿ ಖುತ್ಬ ಆಲಿಸುವುದು. ಅಲ್ಲಾಹು(ﷻ) ಮುಸಲ್ಮಾನರಿಗೆ ಎರಡು ಹಬ್ಬಗಳನ್ನು ದಯಪಾಲಿಸಿದ್ದಾನೆ. ಈದುಲ್ ಫಿತರ್ ಮತ್ತು ಈದುಲ್ ಅದ್‌ಹಾ. ಈ ಎರಡು ಹಬ್ಬಗಳಲ್ಲೂ ಕೆಲವು ವಿಶೇಷ ಆರಾಧನೆಗಳನ್ನು ನಿರ್ದೇಶಿಸಿದ್ದಾನೆ. ಅವು ನಮಾಝ್ ಮತ್ತು ಖುತ್ಬ. ಇವೆರಡು ಅಲ್ಲಾಹನ ಬಳಿಗೆ ನಮ್ಮನ್ನು ಸಮೀಪಗೊಳಿಸುವ ಆರಾಧನೆಗಳಾಗಿವೆ.

10. ತೌಬ ಮಾಡುವುದು ಮತ್ತು ಪಾಪಕೃತ್ಯಗಳಿಂದ ದೂರವಾಗುವುದು. ಇದು ಈ ಹತ್ತು ದಿನಗಳಲ್ಲೂ ವರ್ಷದ ಇತರೆಲ್ಲ ದಿನಗಳಲ್ಲೂ ನಿರ್ವಹಿಸಬೇಕಾಗಿದೆ. ಪಾಪಗಳನ್ನು ಮಾಡುವುದು ಶಿಕ್ಷಾರ್ಹವಾಗಿದೆ. ಆದರೆ ಪವಿತ್ರ ತಿಂಗಳುಗಳಲ್ಲಿ ಮಾಡುವ ಪಾಪಗಳಿಗೆ ಇಮ್ಮಡಿ ಶಿಕ್ಷೆಯಿದೆಯೆಂದು ಕೆಲವು ವಿದ್ವಾಂಸರು ಹೇಳಿದ್ದಾರೆ. ಏಕೆಂದರೆ ಅಲ್ಲಾಹು ಹೇಳುತ್ತಾನೆ:

﴿ إِنَّ عِدَّةَ ٱلشُّهُورِ عِندَ ٱللَّهِ ٱثۡنَا عَشَرَ شَهۡرٗا فِي كِتَٰبِ ٱللَّهِ يَوۡمَ خَلَقَ ٱلسَّمَٰوَٰتِ وَٱلۡأَرۡضَ مِنۡهَآ أَرۡبَعَةٌ حُرُمٞۚ ذَٰلِكَ ٱلدِّينُ ٱلۡقَيِّمُۚ فَلَا تَظۡلِمُواْ فِيهِنَّ أَنفُسَكُمۡ ﴾

"ಆಕಾಶಗಳನ್ನು ಮತ್ತು ಭೂಮಿಯನ್ನು ಸೃಷ್ಟಿಸಿದ ದಿನದಿಂದ ಅಲ್ಲಾಹನ ಗ್ರಂಥದಲ್ಲಿ ತಿಂಗಳುಗಳ ಸಂಖ್ಯೆ ಹನ್ನೆರಡು. ಅವುಗಳಲ್ಲಿ ನಾಲ್ಕು ಪವಿತ್ರ ತಿಂಗಳುಗಳು. ಇದೇ ನೇರವಾದ ಧರ್ಮ. ಆದ್ದರಿಂದ ಆ ತಿಂಗಳುಗಳಲ್ಲಿ ನೀವು ನಿಮ್ಮೊಂದಿಗೆ ಅಕ್ರಮವೆಸಗಬಾರದು." (ಕುರ್‌ಆನ್ 9:36)

ಆ ನಾಲ್ಕು ತಿಂಗಳುಗಳಲ್ಲಿ ನೀವು ನಿಮ್ಮೊಂದಿಗೆ ಅಕ್ರಮವೆಸಗಬಾರದೆಂದು ಅಲ್ಲಾಹು ಇಲ್ಲಿ ವಿಶೇಷವಾಗಿ ಹೇಳಿದ್ದಾನೆ. ಆದ್ದರಿಂದ ಈ ತಿಂಗಳುಗಳಲ್ಲಿ ಮಾಡುವ ಪಾಪಗಳು ಇತರ ತಿಂಗಳುಗಳಲ್ಲಿ ಮಾಡುವ ಪಾಪಗಳಂತಲ್ಲ ಎಂದು ಇದರಿಂದ ಅರ್ಥ ಮಾಡಿಕೊಳ್ಳಬಹುದು. ವಸ್ತುಸ್ಥಿತಿ ಹೀಗಿರುವಾಗ ಈ ಪವಿತ್ರ ತಿಂಗಳುಗಳಲ್ಲೇ ಬರುವ ಈ ಶ್ರೇಷ್ಠವಾದ ಹತ್ತು ದಿನಗಳಲ್ಲಿ ಮಾಡುವ ಪಾಪಗಳ ಸ್ಥಿತಿ ಹೇಗಿರಬಹುದು?

ಈ ಹತ್ತು ದಿನಗಳಲ್ಲಿ ಬರುವ ಪರಮ ಶ್ರೇಷ್ಠ ಅರಫ ದಿನದ ಬಗ್ಗೆ ಪ್ರವಾದಿ(ﷺ) ಯವರು ಹೇಳುತ್ತಾರೆ:

«يَوْمُ عَرَفَةَ هَذَا يَوْمٌ مَنْ مَلَكَ سَمْعَهُ وَبَصَرَهُ وَلِسَانَهُ غُفِرَ لَهُ».

"ಅರಫ ದಿನ. ಇದು ಎಂತಹ ದಿನವೆಂದರೆ ಈ ದಿನ ಕಿವಿ, ಕಣ್ಣು ಮತ್ತು ನಾಲಗೆಯನ್ನು ನಿಯಂತ್ರಿಸುವವರ ಪಾಪಗಳನ್ನು ಅಲ್ಲಾಹು ಕ್ಷಮಿಸುತ್ತಾನೆ." (ಅಹ್ಮದ್ 1/329, ಅಬೂ ಯಅ್‌ಲಾ 2441)

ಒಟ್ಟಿನಲ್ಲಿ, ಈ ಹತ್ತು ದಿನರಾತ್ರಿಗಳು ಒಬ್ಬ ಮುಸಲ್ಮಾನನಿಗೆ ಸಂಬಂಧಿಸಿದಂತೆ ಅತ್ಯಧಿಕ ಪ್ರಾಮುಖ್ಯತೆಯನ್ನು ಹೊಂದಿರುವ ಅತಿ ಶ್ರೇಷ್ಠ ದಿನರಾತ್ರಿಗಳಾಗಿವೆ. ಈ ದಿನರಾತ್ರಿಗಳಲ್ಲಿ ಅಲ್ಲಾಹು(ﷻ) ಮೆಚ್ಚುವಂತಹ ಸತ್ಕರ್ಮಗಳನ್ನು ನಿರ್ವಹಿಸಿ ಅವನ ಸಾಮೀಪ್ಯವನ್ನು ಪಡೆಯಲು ಗರಿಷ್ಠ ಪ್ರಯತ್ನ ಮಾಡಬೇಕಾಗಿದೆ. ಈ ಹತ್ತು ದಿನ ರಾತ್ರಿಗಳನ್ನು ಸ್ವಲ್ಪವೂ ಹಾಳು ಮಾಡದೆ ನಮಗೆ ಸಾಧ್ಯವಾಗುವ ಎಲ್ಲ ವಿಧದ ಆರಾಧನೆಗಳ ಮೂಲಕ ಮತ್ತು ಸತ್ಕರ್ಮಗಳ ಮೂಲಕ ಸಿಂಗರಿಸಬೇಕಾಗಿದೆ.

ಅಲ್ಲಾಹು ನಮ್ಮೆಲ್ಲರಿಗೆ ಅಂತಹ ಸೌಭಾಗ್ಯವನ್ನು ಕರುಣಿಸಲಿ. ಅಲ್ಲಾಹು(ﷻ) ನಮ್ಮ ಪಾಪಗಳನ್ನು ಕ್ಷಮಿಸಿ ನಮ್ಮೆಲ್ಲರನ್ನೂ ಅವನ ಸ್ವರ್ಗಲೋಕದಲ್ಲಿ ಒಟ್ಟುಗೂಡಿಸಲಿ. ಆಮೀನ್ ಯಾ ರಬ್ಬಲ್ ಆಲಮೀನ್. ■

# ಅಂತ್ಯದಿನದ ಚಿಹ್ನೆಗಳು

ಒಬ್ಬ ದರಿದ್ರ ವ್ಯಕ್ತಿ ಜನರ ನಾಯಕನಾಗಿ ಮಾರ್ಪಡುವಾಗ, ಜನರ ದೊರೆಯಾಗಿ ಮಾರ್ಪಡುವಾಗ, ಅವನ ರಾಜ್ಯ ಚಿಕ್ಕದಾಗಿದ್ದರೂ, ದೊಡ್ಡದಾಗಿದ್ದರೂ, ಜನರ ಹಕ್ಕುಗಳನ್ನು ಮಾನ್ಯ ಮಾಡಲು ಅವನಿಂದ ಖಂಡಿತ ಸಾಧ್ಯವಾಗದು. ಬದಲಾಗಿ ಆತ ಜನರ ಸಂಪತ್ತನ್ನು ದೋಚುವುದರಲ್ಲೇ ಮಗ್ನನಾಗುವನು.

✍ ಹಾಫಿಝ್ ಇಬ್ನ್ ರಜಬ್ ಅಲ್‌ಹಂಬಲೀ

ಅಂತ್ಯದಿನದ ಸಂಬಂಧಿಸಿದಂತೆ ಈ ಹದೀಸಿನಲ್ಲಿ (ಹದೀಸ್ ಜಿಬ್ರೀಲ್) ಪ್ರವಾದಿ(ﷺ) ಯವರು ಎರಡು ಚಿಹ್ನೆಗಳನ್ನು ವಿವರಿಸಿದ್ದಾರೆ.

**ಮೊದಲನೆಯದು:**

«أَنْ تَلِدَ الْأَمَةُ رَبَّتَهَا».

“ದಾಸಿ ಆಕೆಯ ಯಜಮಾನತಿಗೆ ಜನ್ಮ ನೀಡುವುದು.”

ಇನ್ನೊಂದು ಹದೀಸಿನಲ್ಲಿ ‘ಯಜಮಾನನಿಗೆ’ ಎಂದಿದೆ.

**ಎರಡನೆಯದು:**

«أَنْ تَـرَى الْحُفَـاةَ الْعُـرَاةَ الْعَالَـةَ رَعَاءَ الشَّـاءِ يَتَطَاوَلُـونَ فِـي الْبُنْيَـانِ».

“ಪಾದರಕ್ಷೆಯಿಲ್ಲದ, ಉಡಲು ಬಟ್ಟೆಯಿಲ್ಲದ ಕುರುಬರು ಗಗನಚುಂಬಿ ಕಟ್ಟಡಗಳನ್ನು ಕಟ್ಟಲು ಪರಸ್ಪರ ಸ್ಪರ್ಧಿಸುವುದನ್ನು ನೀನು ಕಾಣುವುದು.”

ಪಾದರಕ್ಷೆಯಿಲ್ಲದ, ಉಡಲು ಬಟ್ಟೆಯಿಲ್ಲದ, ಕುರುಬರು ಎಂದರೆ ಕೆಳವರ್ಗದ ಜನರು ಎಂದರ್ಥ. ಇವರು ಇತರ ಜನರ ನಾಯಕರಾಗುತ್ತಾರೆ. ಇವರಿಗೆ ಐಶ್ವರ್ಯವುಂಟಾಗಿ ಕಟ್ಟಡಗಳನ್ನು ನಿರ್ಮಿಸುವುದರಲ್ಲಿಯೂ ಅವುಗಳನ್ನು ಅಲಂಕರಿಸುವುದರಲ್ಲಿಯೂ ಮಗ್ನರಾಗುತ್ತಾರೆ.

ಅಬೂ ಹುರೈರ(ؓ) ರವರ ಹದೀಸಿನಲ್ಲಿ ಮೂರು ಚಿಹ್ನೆಗಳನ್ನು ವಿವರಿಸಲಾಗಿದೆ.

ಒಂದು: ದಾಸಿ ಆಕೆಯ ಯಜಮಾನತಿಗೆ ಜನ್ಮ ನೀಡುವುದು.

ಎರಡು: ಪಾದರಕ್ಷೆಯಿಲ್ಲದ, ಉಡಲು ಬಟ್ಟೆಯಿಲ್ಲದ ಜನರು ಇತರ ಜನರಿಗೆ ನಾಯಕರಾಗಿ ಮಾರ್ಪಡುವುದು.

ಮೂರು: ಜಾನುವಾರು ಮೇಯಿಸುವ ಜನರು ಕಟ್ಟಡ ಕಟ್ಟುವುದರಲ್ಲಿ ಪರಸ್ಪರ ಸ್ಪರ್ಧಿಸುವುದು.

ಈ ಹದೀಸ್ ಅಬ್ದುಲ್ಲಾಹ್ ಇಬ್ನ್ ಅತಾಅ್‌ರವರ ಮೂಲಕ ಅಬ್ದುಲ್ಲಾಹ್ ಇಬ್ನ್ ಬುರೈದ(ؓ) ರಿಂದಲೂ ವರದಿಯಾಗಿದೆ. ಅದರಲ್ಲಿ ಹೀಗಿದೆ:

«وَإِنْ تَرَى الصُّمَّ الْبُكْمَ الْعُمْيَ الْحُفَاةَ رِعَاءَ الشَّـاءِ

يَتَطَاوَلُونَ فِـي الْبُنْيَانِ مُلُوكَ النَّاسِ».

“ಕಿವುಡರು, ಮೂಕರು ಮತ್ತು ಕುರುಡರಾಗಿರುವ ಪಾದರಕ್ಷೆ-ಯಿಲ್ಲದ ಕುರುಬರು ಎತ್ತರದ ಕಟ್ಟಡಗಳನ್ನು ನಿರ್ಮಿಸುವುದರಲ್ಲಿ ದೊರೆಗಳೊಂದಿಗೆ ಸ್ಪರ್ಧಿಸುವುದು.”

ಕಿವುಡರು, ಮೂಕರು ಮತ್ತು ಕುರುಡರು ಎಂದರೆ ಅಕ್ಷರಜ್ಞಾನವಿ-ಲ್ಲದ ಅವಿವೇಕಿಗಳು ಎಂದರ್ಥ.

ಇದೇ ಅರ್ಥದಲ್ಲಿ ಇನ್ನೂ ಅನೇಕ ಹದೀಸ್‌ಗಳಿವೆ.

ಇಮಾಂ ಅಹ್ಮದ್ ಮತ್ತು ಅತ್ತಿರ್ಮಿದಿ ಹುದೈಫ(ﷺ) ರಿಂದ ವರದಿ ಮಾಡಿದ ಹದೀಸಿನಲ್ಲಿ ಪ್ರವಾದಿ(ﷺ) ಯವರು ಹೇಳುತ್ತಾರೆ:

«لَا تَقُومُ السَّاعَةُ حَتَّى يَكُونَ أَسْـعَدَ النَّاسِ بِالدُّنْيَا لُكَعُ بْنُ لُكَعٍ».

“ಭೂಲೋಕದ ಜನರಲ್ಲೇ ಅತಿದೊಡ್ಡ ಅವಿವೇಕಿಗಳು ಅತ್ಯಂತ ಭಾಗ್ಯವಂತರಾಗಿ ಜೀವಿಸುವ ತನಕ ಅಂತ್ಯದಿನ ಸಂಭವಿಸುವುದಿಲ್ಲ.”

ಸಹೀಹ್ ಇಬ್ನ್ ಹಿಬ್ಬಾನ್‌ನಲ್ಲಿರುವ ವರದಿಯಲ್ಲಿ ಹೀಗಿದೆ:

عَنْ أَنَسٍ عَنِ النَّبِـيِّ صَلَّى اللَّهُ عَلَيْهِ وَسَـلَّمَ قَالَ: «لَا تَنْقَضِـي الدُّنْيَا حَتَّى تَكُونَ عِنْدَ لُكَـعُ بْنُ لُكَعٍ».

“ಭೂಲೋಕವು ಅವಿವೇಕಿಗಳ ಪಾಲಾಗುವ ತನಕ ಜಗತ್ತು ಅಂತ್ಯವಾಗುವುದಿಲ್ಲ.”

ಅತ್ತಬರಾನಿಯಲ್ಲಿರುವ ಅಬೂದರ್ರ್(ﷺ) ರವರ ಹದೀಸಿನಲ್ಲಿ ಹೀಗಿದೆ: ಪ್ರವಾದಿ(ﷺ) ಯವರು ಹೇಳಿದರು:

«لَا تَقُـومُ السَّـاعَةُ حَتَّـى يَغْلِـبَ عَلَـى الدُّنْيَـا لُكَـعُ بْـنُ لَكَعٍ».

“ಅವಿವೇಕಿಗಳು ಭೂಮಿಯ ಮೇಲೆ ಪ್ರಾಬಲ್ಯ ಪಡೆಯುವ ತನಕ ಅಂತ್ಯದಿನ ಸಂಭವಿಸುವುದಿಲ್ಲ.”

ಇಮಾಂ ಅಹ್ಮದ್ ಮತ್ತು ಅತ್ತಬರಾನಿ ಅನಸ್(ﷺ) ರಿಂದ ವರದಿ ಮಾಡಿದ ಹದೀಸಿನಲ್ಲಿ ಪ್ರವಾದಿ(ﷺ) ಯವರು ಹೇಳುತ್ತಾರೆ:

«بَيْنَ يَـدَيِ السَّـاعَةِ سِـنُونَ خَدَّاعَةٌ. يُتَّهَـمُ فِيهَا الْأَمِيـنُ وَيُؤْتَمَـنُ فِيهَـا الْمُتَّهَـمُ. وَيَنْطِـقُ فِيهَا الرُّوَيْبِضَةُ». قَالُوا: وَمَا الرُّوَيْبِضَةُ؟ قَالَ: «السَّـفِيهُ يَنْطِـقُ فِي أَمْـرِ النَّاسِ».

“ಅಂತ್ಯದಿನ ಸಂಭವಿಸುವುದಕ್ಕೆ ಮುನ್ನ ವಂಚನೆಯಿಂದ ಕೂಡಿದ ಕೆಲವು ವರ್ಷಗಳು ಬರುವುವು. ಆಗ ಪ್ರಾಮಾಣಿಕನನ್ನು ಆರೋಪಿಯಾಗಿ ಮತ್ತು ಆರೋಪಿಯನ್ನು ಪ್ರಾಮಾಣಿಕನಾಗಿ ಕಾಣಲಾಗುವುದು. ಆ ಕಾಲದಲ್ಲಿ ರುವೈಬಿದ ಮಾತನಾಡುವುದು.”

ಸಹಾಬಾಗಳು ಕೇಳಿದರು: “ರುವೈಬಿದ ಎಂದರೇನು?”

ಪ್ರವಾದಿ(ﷺ) ಯವರು ಹೇಳಿದರು: “ಸಾರ್ವಜನಿಕರ ವಿಷಯದಲ್ಲಿ ಅವಿವೇಕಿಗಳು ಮಾತನಾಡುವುದು.”

ಇನ್ನೊಂದು ವರದಿಯಲ್ಲಿ ಹೀಗಿದೆ:

«الْفَاسِقُ يَتَكَلَّمُ فِي أَمْرِ الْعَامَّةِ».

“ಸಾರ್ವಜನಿಕರ ವಿಷಯದಲ್ಲಿ ದುಷ್ಕರ್ಮಿಗಳು ಮಾತನಾಡುವುದು.”

ಇಮಾಂ ಅಹ್ಮದ್‌ರ ವರದಿಯಲ್ಲಿ ಹೀಗಿದೆ:

«إِنَّ بَيْـنَ يَـدَيِ الدَّجَّالِ سِـنِينَ خَدَّاعَـةً. يُكَذَّبُ فِيهَا الصَّـادِقُ وَيُصَـدَّقُ فِيهَا الْـكَاذِبُ. وَيُخَوَّنُ فِيهَـا الْأَمِيـنُ وَيُؤْتَمَنُ فِيهَـا الْخَائِنُ».

“ದಜ್ಜಾಲ್ ಬರುವುದಕ್ಕೆ ಮುನ್ನ ವಂಚನೆಯಿಂದ ಕೂಡಿದ ಕೆಲವು ವರ್ಷಗಳು ಬರುವುವು. ಆಗ ಸತ್ಯವಂತನನ್ನು ಸುಳ್ಳನೆಂದು ಮತ್ತು ಸುಳ್ಳನನ್ನು ಸತ್ಯವಂತನೆಂದು, ಪ್ರಾಮಾಣಿಕನನ್ನು ವಂಚಕನೆಂದು ಮತ್ತು ವಂಚಕನನ್ನು ಪ್ರಾಮಾಣಿಕನೆಂದು ಪರಿಗಣಿಸಲಾಗುವುದು.”

ಈ ಹದೀಸಿನಲ್ಲಿ ನಾವು ಪ್ರಸ್ತಾವಿಸಿದ ಅಂತ್ಯದಿನದ ಚಿಹ್ನೆಗಳ ಒಟ್ಟು ಸಾರಾಂಶ ಏನೆಂದರೆ ಅಧಿಕಾರವು ಅನರ್ಹರ ಪಾಲಾಗುತ್ತದೆ ಎನ್ನುವುದು. ಅಂತ್ಯದಿನದ ಬಗ್ಗೆ ವಿಚಾರಿಸಿದಾಗ ಪ್ರವಾದಿ(ﷺ) ಯವರು ಇದೇ ಉತ್ತರವನ್ನು ನೀಡಿದ್ದರು.

«إِذَا وُسِّدَ الْأَمْرُ إِلَى غَيْرِ أَهْلِهِ فَانْتَظِرِ السَّاعَةَ».

“ಅಧಿಕಾರವು ಅನರ್ಹರ ಪಾಲಾಗುವಾಗ ಅಂತ್ಯದಿನವನ್ನು ನಿರೀಕ್ಷಿಸಿರಿ.”

ಪಾದರಕ್ಷೆಯಿಲ್ಲದ, ಉಡಲು ಬಟ್ಟೆಯಿಲ್ಲದ ಕುರುಬರು ಜನರ ನಾಯಕರಾಗಿ ಮತ್ತು ಐಶ್ವರ್ಯದ ಒಡೆಯರಾಗಿ ಮಾರ್ಪಡುವುದು, ಎಲ್ಲಿಯವರೆಗೆಂದರೆ ಗಗನಚುಂಬಿ ಕಟ್ಟಡಗಳನ್ನು ಕಟ್ಟಲು ಪರಸ್ಪರ ಸ್ಪರ್ಧಿಸುವವರೆಗೆ ಅವರು ಸಿರಿವಂತರಾಗುವಾಗ ಧಾರ್ಮಿಕ ಮತ್ತು ಲೌಕಿಕ ವ್ಯವಸ್ಥೆಗಳೆಲ್ಲವೂ ತಲೆಕೆಳಗಾಗುವುದು.

ಒಬ್ಬ ದರಿದ್ರ ವ್ಯಕ್ತಿ ಜನರ ನಾಯಕನಾಗಿ ಮಾರ್ಪಡುವಾಗ, ಜನರ ದೊರೆಯಾಗಿ ಮಾರ್ಪಡುವಾಗ, ಅವನ ರಾಜ್ಯ ಚಿಕ್ಕದಾಗಿದ್ದರೂ, ದೊಡ್ಡದಾಗಿದ್ದರೂ, ಜನರ ಹಕ್ಕುಗಳನ್ನು ಮಾನ್ಯ ಮಾಡಲು ಅವನಿಂದ ಖಂಡಿತ ಸಾಧ್ಯವಾಗದು. ಬದಲಾಗಿ ಆತ ಜನರ ಸಂಪತ್ತನ್ನು ದೋಚುವುದರಲ್ಲೇ ಮಗ್ನನಾಗುವನು. ಸಲಫ್‌ಗಳಲ್ಲಿ ಕೆಲವರು ಹೇಳುತ್ತಿದ್ದರು:

لِأَنْ تَمُدَّ يَدَكَ إِلَى فَمِ التِّنِّينِ فَيَقْضِمَهَا خَيْرٌ لَكَ مِنْ أَنْ تَمُدَّهَا إِلَى يَدِ غَنِيٍّ قَدْ عَالَجَ الْفَقْرَ.

“ನೀನು ನಿನ್ನ ಕೈಯನ್ನು ಒಂದು ಮಹಾ ಸರ್ಪದ ಬಾಯಿಗೆ ಚಾಚಿ ಅದು ಅದನ್ನು ಕಚ್ಚುವುದು ನೀನು ನಿನ್ನ ಕೈಯನ್ನು ಈಗಾಗಲೇ ಬಡತನವನ್ನು ಅನುಭವಿಸಿದ ಒಬ್ಬ ಸಿರಿವಂತನ ಕಡೆಗೆ ಚಾಚುವುದಕ್ಕಿಂತಲೂ ಶ್ರೇಷ್ಠವಾಗಿದೆ.”

ಜನರ ನಾಯಕರಾಗಿ ಮಾರ್ಪಟ್ಟ ಈ ಪಾದರಕ್ಷೆಯಿಲ್ಲದ, ಉಡಲು ಬಟ್ಟೆಯಿಲ್ಲದ ಕುರುಬರು ಅವಿವೇಕಿಗಳು ಮತ್ತು ಕೊಳಕರಾಗಿದ್ದರೆ ಅವರಿಂದ ಧರ್ಮವೂ ಹಾಳಾಗುವುದು ಖಂಡಿತ. ಕಾರಣ, ಧಾರ್ಮಿಕ ಸುಧಾರಣೆಗೆ ಅಥವಾ ದೀನೀ ವಿದ್ಯಾಭ್ಯಾಸಕ್ಕೆ ಅವರ ಬಳಿ ಸಮಯವಿಲ್ಲ. ಬದಲಾಗಿ ಅವರ ಗುರಿ ಧನ ಸಂಪಾದಿಸುವುದೇ ಆಗಿರುತ್ತದೆ. ದೀನ್ ಹಾಳಾದರೂ, ಜನರು ಹಾಳಾದರೂ ಅವರಿಗೆ ದೊಡ್ಡ ವಿಷಯವೇ ಅಲ್ಲ. ಜನರಿಗೆ ಅಗತ್ಯ ವಸ್ತುಗಳು ಸಿಗದಿದ್ದರೂ ಅವರಿಗೆ ಅದರ ತಲೆಬಿಸಿ ಇಲ್ಲ.

ಇನ್ನೊಂದು ಹದೀಸಿನಲ್ಲಿ ಹೀಗಿದೆ:

«لَا تَقُومُ السَّاعَةُ حَتَّى يَسُودَ كُلَّ قَبِيلَةٍ مُنَافِقُوهَا».

“ಎಲ್ಲ ಗೋತ್ರಗಳಲ್ಲೂ ಅವರಲ್ಲಿರುವ ಕಪಟಿಗಳು ನಾಯಕರಾಗುವ ತನಕ ಅಂತ್ಯದಿನ ಸಂಭವಿಸುವುದಿಲ್ಲ.”

ದೊರೆಗಳ ಮತ್ತು ನಾಯಕರ ಸ್ಥಿತಿ ಹೀಗಾಗುವಾಗ ವಸ್ತುಸ್ಥಿತಿಗಳು ತಲೆಕೆಳಗಾಗುತ್ತವೆ. ಸುಳ್ಳರನ್ನು ಸತ್ಯವಂತರೆದು ಮತ್ತು ಸತ್ಯವಂತರನ್ನು ಸುಳ್ಳರೆಂದು ಕರೆಯಲಾಗುತ್ತದೆ. ಪ್ರಾಮಾಣಿಕರನ್ನು ವಂಚಕರೆಂದು ಮತ್ತು ವಂಚಕರನ್ನು ಪ್ರಾಮಾಣಿಕರೆಂದು ಪರಿಗಣಿಸಲಾಗುತ್ತದೆ.

ಜನರ ವಿಷಯದಲ್ಲಿ ಅವಿವೇಕಿಗಳು ಮಾತನಾಡತೊಡಗುತ್ತಾರೆ. ವಿದ್ವಾಂಸರು ಮೌನರಾಗುತ್ತಾರೆ ಅಥವಾ ಅವರನ್ನು ಮೌನಗೊಳಿಸಲಾಗುತ್ತದೆ. ಅಥವಾ ಅವರನ್ನು ಸಂಪೂರ್ಣ ನಾಮಾವಶೇಷ ಮಾಡಲಾಗುತ್ತದೆ. ಸಹೀಹಾದ ಹದೀಸೊಂದರಲ್ಲಿ ಪ್ರವಾದಿ(ﷺ) ಯವರು ಹೇಳುತ್ತಾರೆ:

«إِنَّ مِنْ أَشْرَاطِ السَّاعَةِ أَنْ يُرْفَعَ الْعِلْمُ وَيَظْهَرَ الْجَهْلُ».

“ಜ್ಞಾನ ಇಲ್ಲದಾಗುವುದು ಮತ್ತು ಅಜ್ಞಾನ ಪ್ರಕಟವಾಗುವುದು ಅಂತ್ಯದಿನದ ಚಿಹ್ನೆಯಾಗಿದೆ.”

ಇನ್ನೊಂದು ಹದೀಸಿನಲ್ಲಿ ಅವರು ಹೇಳುತ್ತಾರೆ:

«أَنَّهُ يُقْبَضُ الْعِلْمُ بِقَبْضِ الْعُلَمَاءِ حَتَّى إِذَا لَمْ يَبْقَ عَالِمٌ اتَّخَذَ النَّاسُ رُؤُوسًا جُهَّالًا. فَسُئِلُوا فَأَفْتَوْا بِغَيْرِ عِلْمٍ. فَضَلُّوا وَأَضَلُّوا».

“ವಿದ್ವಾಂಸರ ಮರಣದೊಂದಿಗೆ ಜ್ಞಾನವನ್ನು ವಶಪಡಿಸಲಾಗುವುದು. ಹೀಗೆ ಒಬ್ಬನೇ ಒಬ್ಬ ವಿದ್ವಾಂಸರೂ ಇಲ್ಲದಾಗುವಾಗ ಜನರು

*49 ನೇ ಪುಟಕ್ಕೆ*

# ಜಮ್ರಕ್ಕೆ ಕಲ್ಲೆಸೆಯುವುದರ ಉದ್ದೇಶ

ಶೈಖ್ ಅಬ್ದುಲ್ ಅಝೀಝ್ ಇಬ್ನ್ ಬಾಝ್

ಈದ್ ದಿನದಂದು ಜಮ್ರತುಲ್ ಅಕಬಕ್ಕೆ ಮತ್ತು ಮಿನಾದಲ್ಲಿ ತಂಗುವ ಮೂರು ದಿನ ಮೂರು ಜಮ್ರಗಳಿಗೆ ಕಲ್ಲೆಸುವುದು ಪ್ರವಾದಿ(ﷺ) ಯವರು ನಿರ್ದೇಶಿಸಿದ ಕಾರ್ಯವಾಗಿದೆ. ಇದಕ್ಕೆ ಮಹತ್ವವಾದ ಪುಣ್ಯವಿದೆ. ಇದರ ಉದ್ದೇಶಗಳನ್ನು ಹೀಗೆ ಪಟ್ಟಿ ಮಾಡಬಹುದು:

1. ಅದು ಇಬ್ರಾಹೀಂ(ﷺ) ರವರ ಚರ್ಯೆಯ ಅನುಸರಣೆಯಾಗಿದೆ. ಹಜ್ಜತುಲ್ ವಿದಾಅ್‌ನಲ್ಲಿ ನಮ್ಮ ಪ್ರವಾದಿಯವರು(ﷺ) ನಮಗೆ ಅದನ್ನು ನಿರ್ದೇಶಿಸಿದ್ದಾರೆ.

2. ಅದು ಅಲ್ಲಾಹನ ಸ್ಮರಣೆಯನ್ನು ನೆಲೆನಿಲ್ಲಿಸುವುದಕ್ಕಾಗಿದೆ. ಏಕೆಂದರೆ ಪ್ರವಾದಿ(ﷺ) ಯವರು ಹೇಳುತ್ತಾರೆ:

   «إِنَّمَا جُعِلَ الطَّوَافُ بِالْبَيْتِ وَالسَّعْيُ بَيْنَ الصَّفَا وَالْمَرْوَةِ وَرَمْيُ الْجِمَارِ لِإِقَامَةِ ذِكْرِ اللَّهِ».

   "ಕಅ್‌ಬಾಲಯಕ್ಕೆ ತವಾಫ್ ಮಾಡುವುದು, ಸಫಾ ಮತ್ತು ಮರ್ವಾದ ಮಧ್ಯೆ ಸಈ ಮಾಡುವುದು, ಜಮ್ರಗಳಿಗೆ ಕಲ್ಲೆಸೆಯುವುದು ಮುಂತಾದವುಗಳನ್ನು ನಿಶ್ಚಯಿಸಿರುವುದು ಅಲ್ಲಾಹನ ಸ್ಮರಣೆಯನ್ನು ನೆಲೆನಿಲ್ಲಿಸುವುದಕ್ಕಾಗಿದೆ."

3. ಏಳು ಬಾರಿ ಕಲ್ಲೆಸೆಯುವುದರ ಹಿಂದಿರುವ ಯುಕ್ತಿ ಏನೆಂದರೆ ಅಲ್ಲಾಹು ಅನೇಕ ವಿಧದ ಆರಾಧನೆಗಳಲ್ಲಿ ಹೀಗೆ ಏಳು ಬಾರಿ ಮಾಡಬೇಕೆಂಬುದನ್ನು ನಿಶ್ಚಯಿಸಿರುವುದನ್ನು ಕಾಣಬಹುದು. ಉದಾಹರಣೆಗೆ, ತವಾಫ್ ಮಾಡುವುದು, ಸಈ ಮಾಡುವುದು ಇತ್ಯಾದಿ. ಪ್ರವಾದಿ(ﷺ) ಯವರು ಹೇಳುತ್ತಾರೆ:

   «أُوتِرُوا فَإِنَّ اللَّهَ وِتْرٌ يُحِبُّ الْوِتْرَ».

   "ನೀವು ಬೆಸ ಸಂಖ್ಯೆಯಲ್ಲಿ ನಿರ್ವಹಿಸಿರಿ. ಏಕೆಂದರೆ ಅಲ್ಲಾಹು ಒಬ್ಬನು. ಅವನು ಬೆಸ ಸಂಖ್ಯೆಯನ್ನು ಇಷ್ಟಪಡುತ್ತಾನೆ."

   ಹೀಗೆ ಆರಾಧನೆಗಳನ್ನು ಬೆಸ ಸಂಖ್ಯೆಯಲ್ಲಿ ನಿರ್ವಹಿಸಬೇಕೆಂದು ಹೇಳುವುದರ ಹಿಂದೆ ಅಲ್ಲಾಹನಿಗೆ ಏನಾದರೂ ಯುಕ್ತಿಯಿರಬಹುದು. ಕಾರಣ ಅಲ್ಲಾಹು ಯಾವುದೇ ಕಾರಣವಿಲ್ಲದೆ, ಅಥವಾ ಯಾವುದೇ ಯುಕ್ತಿಯಿಲ್ಲದೆ ಏನನ್ನೂ ನಿರ್ದೇಶಿಸುವುದಿಲ್ಲ.

4. ಇಸ್ಲಾಮ್ ಧರ್ಮವು ಅಲ್ಲಾಹನ ಆಜ್ಞೆಗಳನ್ನು ಪಾಲಿಸುವ ಧರ್ಮವಾಗಿದೆ. ಕುರ್‌ಆನ್ ಮತ್ತು ಸುನ್ನತ್ತಿನಲ್ಲಿರುವ ನಿರ್ದೇಶನದ ಪ್ರಕಾರ ಇಬಾದತ್ ನಿರ್ವಹಿಸಬೇಕಾದುದು ಮುಸ್ಲಿಮನಿಗೆ ಸಂಬಂಧಿಸಿದಂತೆ ಕಡ್ಡಾಯವಾಗಿದೆ. ಆ ನಿರ್ದೇಶನದ ಹಿಂದಿರುವ ಯುಕ್ತಿ ಏನೆಂದು ತಿಳಿದು ಬರದಿದ್ದರೂ ಸಹ ಅದರ ಪ್ರಕಾರ ಕಾರ್ಯಪ್ರವೃತ್ತರಾಗಬೇಕಾಗಿದೆ. ಕಾರಣ, ಅಲ್ಲಾಹು ಎಲ್ಲ ವಿಷಯಗಳ ಅರಿವುಳ್ಳವನು. ಅವನು ಮಹಾ ಯುಕ್ತಿವಂತ. ಆದರೆ ಮನುಷ್ಯನು ಹಾಗಲ್ಲ. ಮನುಷ್ಯನಿಗೆ ಎಲ್ಲ ವಿಷಯಗಳ ಬಗ್ಗೆಯೂ ಅರಿವಿಲ್ಲ. ಅಲ್ಲಾಹನ ಜ್ಞಾನಕ್ಕೆ ಹೋಲಿಸಿದರೆ ಮನುಷ್ಯನ ಜ್ಞಾನ ಏನೂ

*33 ನೇ ಪುಟಕ್ಕೆ*

# ಕುರ್‌ಆನಿನಲ್ಲಿ ಮಾತನಾಡುವ ಮಹಿಳೆ!

ಕುರ್‌ಆನಿನಲ್ಲಿ ಮಾತನಾಡುವುದು ಧರ್ಮಸಮ್ಮತವಲ್ಲ. ಏಕೆಂದರೆ ಕುರ್‌ಆನ್ ಅಲ್ಲಾಹನ ಮಾತು. ಅವನದನ್ನು ಸನ್ಮಾರ್ಗ, ಕಾರುಣ್ಯ ಮತ್ತು ಉಪಶಮನವಾಗಿ ಅವತೀರ್ಣಗೊಳಿಸಿದ್ದಾನೆ. ಅದನ್ನು ಪಾರಾಯಣ ಮಾಡುವುದು ಮತ್ತು ಅದರ ಪ್ರಕಾರ ಕಾರ್ಯವೆಸಗುವುದು ಆರಾಧನೆ (ಇಬಾದತ್) ಯಾಗಿದೆ. ಅದು ಅಲ್ಲಾಹನ ಮಾತಾಗಿರುವುದರಿಂದ ಮನುಷ್ಯರು ಅದನ್ನು ತಮ್ಮ ಮಾತುಗಳನ್ನಾಗಿ ಮಾಡುವುದಕ್ಕೆ ಅಥವಾ ಐಹಿಕ ಅಗತ್ಯಗಳನ್ನು ಸೂಚಿಸುವುದಕ್ಕೆ ಮಾಧ್ಯಮವನ್ನಾಗಿ ಮಾಡುವುದಕ್ಕೆ ಅನುಮತಿಯಿಲ್ಲ.

✍ ಶೈಖ್ ಮುಹಮ್ಮದ್ ಸಾಲಿಹ್ ಅಲ್ ಮುನಜ್ಜಿದ್

**ಪ್ರಶ್ನೆ:** ಕುರ್‌ಆನನ್ನಲ್ಲದೆ ಬೇರೇನನ್ನೂ ಮಾತನಾಡದಿರುವ ಮಹಿಳೆಯ ಕಥೆ ಎಷ್ಟರ ಮಟ್ಟಿಗೆ ಸರಿ? ಅಬ್ದುಲ್ಲಾಹ್ ಇಬ್ನ್ ಮುಬಾರಕ್(ﷺ) ರವರು ಈಕೆಯ ಕಥೆಯನ್ನು ವರದಿ ಮಾಡಿದ್ದಾರೆನ್ನುವುದು ನಿಜವೇ? ಈ ಕಥೆಗೆ ಸಹೀಹಾದ ಸನದ್ ಇದೆಯೇ? ಈ ಕಥೆ ಇತಿಹಾಸದ ಮೂಲಕ ರುಜುವಾತಾಗಿಲ್ಲ ಎಂದು ಶೈಖ್ ಉಸೈಮೀನ್‌ರವರು ತಮ್ಮ ತರಗತಿಗಳಲ್ಲಿ ಮತ್ತು ಫತ್ವಾಗಳಲ್ಲಿ ಹೇಳಿದ್ದಾರೆಯೇ? ಇನ್ನು ಈ ಕಥೆ ಸತ್ಯವೆಂದು ರುಜುವಾತಾದರೂ ಈ ರೀತಿ ಕುರ್‌ಆನಿನಲ್ಲಿ ಮಾತನಾಡುವುದು ಶರೀಅತ್ತಿನ ಪ್ರಕಾರ ಎಷ್ಟರ ಮಟ್ಟಿಗೆ ಸರಿ?

**ಉತ್ತರ:** ಸರ್ವಸ್ತುತಿ ಅಲ್ಲಾಹನಿಗೆ ಮೀಸಲು.

ಮೊದಲನೆಯದಾಗಿ, ಈ ಕಥೆಯನ್ನು ಅನೇಕ ಮಂದಿ ವರದಿ ಮಾಡಿದ್ದಾರೆ. ಆದರೆ ಯಾವುದೂ ಸಹೀಹೆಂದು ದೃಢೀಕೃತವಾಗಿಲ್ಲ.

ಇಬ್ನ್ ಅದೀ ತಮ್ಮ 'ಅಲ್‌ಕಾಮಿಲ್'ನಲ್ಲಿ (5/400) ಮತ್ತು ಅಬೂ ನುಐಂ ತಮ್ಮ 'ಹಿಲ್ಯ'ದಲ್ಲಿ (12/182) ಅಬ್ದುಲ್ಲಾಹ್ ಇಬ್ನ್ ದಾವೂದ್ ಅಲ್‌ವಾಸಿತೀ ಎಂಬವರಿಂದ ವರದಿ ಮಾಡುತ್ತಾರೆ: ಅವರು ಹೇಳುತ್ತಾರೆ: ಒಮ್ಮೆ ನಾನು ಅರಫಾತ್‌ನಲ್ಲಿ ನಿಂತಿದ್ದೆ. ಆಗ ಅಲ್ಲೊಬ್ಬಳು ಮಹಿಳೆ ಹೀಗೆ ಹೇಳುತ್ತಿರುವುದು ನನಗೆ ಕೇಳಿಸಿತು.

مَـــنْ يَهْـــدِهِ اللَّـــهُ فَلَا مُضِـــلَّ لَـــهُ، وَمَـــنْ يُضْلِلْ فَلَا هَـــادِيَ لَهُ.

"ಅಲ್ಲಾಹು ಯಾರಿಗೆ ದಾರಿ ತೋರಿಸುತ್ತಾನೋ ಅವನನ್ನು ದಾರಿ ತಪ್ಪಿಸುವವರಾರೂ ಇಲ್ಲ. ಅಲ್ಲಾಹು ಯಾರನ್ನು ದಾರಿ ತಪ್ಪಿಸುತ್ತಾನೋ ಅವನನ್ನು ಸರಿದಾರಿಗೆ ತರುವವರಾರೂ ಇಲ್ಲ."

ಆಕೆ ದಾರಿ ತಪ್ಪಿದ ಮಹಿಳೆಯಾಗಿರಬಹುದೆಂದು ನನಗೆ ಕಂಡಿತು. ನಾನು ಒಂಟೆಯಿಂದ ಇಳಿದು ಆಕೆಯ ಬಳಿಗೆ ಹೋಗಿ ಕೇಳಿದೆ: "ಓ ಮಹಿಳೆಯವರೇ! ತಮ್ಮ ಸಮಸ್ಯೆಯೇನು?"

ಆಕೆ ಹೇಳಿದಳು:

﴿وَلَا تَقْفُ مَا لَيْسَ لَكَ بِهِۦ عِلْمٌ ۚ إِنَّ ٱلسَّمْعَ وَٱلْبَصَرَ وَٱلْفُؤَادَ كُلُّ أُو۟لَـٰٓئِكَ كَانَ عَنْهُ مَسْـُٔولًا ﴿٣٦﴾﴾

“ನಿಮಗೆ ಅರಿವಿಲ್ಲದ ವಿಷಯಗಳನ್ನು ಹಿಂಬಾಲಿಸಬೇಡಿ. ಖಂಡಿತವಾಗಿಯೂ ಶ್ರವಣ, ದೃಷ್ಟಿ ಮತ್ತು ಹೃದಯಗಳೆಲ್ಲವೂ ವಿಚಾರಣೆಯನ್ನು ಎದುರಿಸಲಿವೆ.”

ಈಕೆ ಹರೂರಿ ಪಂಗಡಕ್ಕೆ ಸೇರಿದ ಮಹಿಳೆಯಾಗಿರಬಹುದೆಂದು ನಾನು ಭಾವಿಸಿದೆ. ನಾನು ಕೇಳಿದೆ: “ತಾವು ಎಲ್ಲಿಂದ ಬಂದವರು?”

ಆಕೆ ಹೇಳಿದಳು:

﴿سُبْحَٰنَ ٱلَّذِىٓ أَسْرَىٰ بِعَبْدِهِۦ لَيْلًا مِّنَ ٱلْمَسْجِدِ ٱلْحَرَامِ إِلَى ٱلْمَسْجِدِ ٱلْأَقْصَا﴾

“ರಾತ್ರಿಯಲ್ಲಿ ತನ್ನ ದಾಸನನ್ನು ಮಸ್ಜಿದುಲ್ ಹರಾಂನಿಂದ ಮಸ್ಜಿದುಲ್ ಅಕ್ಸಾಕ್ಕೆ ನಿಶಾ ಪ್ರಯಾಣ ಮಾಡಿಸಿದವನು ಪರಮಪಾವನನು.”

ನಾನು ಆಕೆಯನ್ನು ನನ್ನ ಒಂಟೆಯಲ್ಲಿ ಕೂರಿಸಿ ಅದರ ಹಗ್ಗ ಹಿಡಿದು ಆಕೆಯ ಊರಿನ ಯಾರಾದರೂ ಸಿಗುವರೇ ಎಂದು ಹುಡುಕುತ್ತಾ ನಡೆಯತೊಡಗಿದೆ. ಹೀಗೆ ನಾನು ಮಕ್ದಿಸಿಗಳಾದ (ಅಕ್ಸಾ ನಿವಾಸಿಗಳು) ಜನರ ಬಳಿಗೆ ಬಂದಾಗ ಯಾರ ಹೆಸರನ್ನು ಕರೆಯಬೇಕೆಂದು ಆಕೆಯಲ್ಲಿ ಕೇಳಿದೆ. ಆಕೆ ಹೇಳಿದಳು:

﴿يَٰدَاوُۥدُ إِنَّا جَعَلْنَٰكَ خَلِيفَةً فِى ٱلْأَرْضِ﴾

“ಓ ದಾವೂದ್! ನಾವು ತಮ್ಮನ್ನು ಭೂಮಿಯಲ್ಲಿ ಪ್ರತಿನಿಧಿಯನ್ನಾಗಿ ಮಾಡಿದ್ದೇವೆ.”

﴿يَٰزَكَرِيَّآ إِنَّا نُبَشِّرُكَ بِغُلَٰمٍ﴾

“ಓ ಝಕರಿಯ್ಯಾ! ನಾವು ತಮಗೆ ಒಂದು ಗಂಡು ಮಗುವಿನ ಬಗ್ಗೆ ಶುಭವಾರ್ತೆ ನೀಡುತ್ತಿದ್ದೇವೆ.”

﴿يَٰيَحْيَىٰ خُذِ ٱلْكِتَٰبَ بِقُوَّةٍ﴾

“ಓ ಯಹ್ಯಾ! ಗ್ರಂಥವನ್ನು ಬಿಗಿಯಾಗಿ ಹಿಡಿದುಕೊಳ್ಳಿರಿ.”

ನಾನು, ಓ ಝಕರಿಯ್ಯಾ! ಓ ಯಹ್ಯಾ! ಓ ದಾವೂದ್! ಎಂದು ಗಟ್ಟಿಯಾಗಿ ಕೂಗಿದೆ. ಆಗ ಆ ಗುಂಪಿನಿಂದ ಮೂವರು ಯುವಕರು ನಮ್ಮ ಬಳಿಗೆ ಬಂದು, “ಓ ಅಲ್ಲಿ ನೋಡಿ! ಕಅಬಾಲಯದ ರಬ್ಬಿನ ಮೇಲಾಣೆ! ನಮ್ಮ ತಾಯಿ! ಇವರು ಮೂರು ದಿನಗಳಿಂದ ಕಾಣೆಯಾಗಿದ್ದರು!” ಎಂದರು. ಅವರು ಆಕೆಯನ್ನು ಒಂಟೆಯಿಂದ ಕೆಳಗಿಳಿಸಿದಾಗ ಆಕೆ ಹೇಳಿದಳು:

اذْهَبُوا بِوَرِقِكُمْ هَذِهِ إِلَى الْمَدِينَةِ.

“ನಿಮ್ಮ ಈ ಬೆಳ್ಳಿ ನಾಣ್ಯವನ್ನು ತೆಗೆದುಕೊಂಡು ಪಟ್ಟಣಕ್ಕೆ ಹೋಗಿರಿ.”

ಅವರು ಪಟ್ಟಣಕ್ಕೆ ಹೋಗಿ ಹಣ್ಣುಹಂಪಲು, ಕಬ್ಬು ಮತ್ತು ಕೆಲವು ಕಾಯಿಗಳನ್ನು ತಂದರು. ಅದರಲ್ಲಿ ಕೆಲವನ್ನು ನನಗೆ ನೀಡಿದರು. ಆಕೆ ಯಾಕೆ ಮಾತನಾಡುವುದಿಲ್ಲವೆಂದು ನಾನು ಕೇಳಿದಾಗ ಅವರು ಹೇಳಿದರು: “ನಮ್ಮ ತಾಯಿ ಮೂವತ್ತು ವರ್ಷಗಳಿಂದ ಕುರ್‌ಆನ್ ಅಲ್ಲದೆ ಬೇರೇನನ್ನೂ ಮಾತನಾಡುವುದಿಲ್ಲ. ಅವರಿಗೇನಾದರೂ ತಪ್ಪು ಸಂಭವಿಸಬಹುದೆಂಬ ಭಯದಿಂದ.”

ಈ ಕಥೆಯನ್ನು ವರದಿ ಮಾಡಿದ ಅಬ್ದುಲ್ಲಾಹ್ ಇಬ್ನ್ ದಾವೂದ್ ಅಲ್‌ವಾಸಿತೀಯವರ ಬಗ್ಗೆ ಇಮಾಂ ಅಲ್‌ಬುಖಾರಿ “ಟೀಕೆಗೊಳಗಾದ ವ್ಯಕ್ತಿ” ಎಂದಿದ್ದಾರೆ. “ಇವರು ಪ್ರಬಲರಲ್ಲ, ಇವರು ವರದಿ ಮಾಡುವ ಹದೀಸ್‌ಗಳಲ್ಲಿ ನಿಷೇಧಾತ್ಮಕ ಅಂಶಗಳಿವೆ” ಎಂದು ಅಬೂ ಹಾತಿಮ್ ಹೇಳಿದ್ದಾರೆ. ಅಲ್‌ಹಾಕಿಂ ಅಬೂ ಅಹ್ಮದ್ ಹೇಳುತ್ತಾರೆ: “ಹದೀಸ್ ವಿದ್ವಾಂಸರ ಪ್ರಕಾರ ಇವರು ಪ್ರಬಲರಲ್ಲ.” ಇವರು ದುರ್ಬಲರೆಂದು ಅನ್ನಸಾಈ ಹೇಳಿದ್ದಾರೆ. “ಇವರು ನಿಷೇಧಾತ್ಮಕ ಹದೀಸ್‌ಗಳನ್ನು ಅತ್ಯಧಿಕವಾಗಿ ವರದಿ ಮಾಡುತ್ತಾರೆ. ಇವರು ಇಂತಹ ಹದೀಸ್‌ಗಳನ್ನು ಪ್ರಸಿದ್ಧ ವ್ಯಕ್ತಿಗಳ ಹೆಸರಲ್ಲಿ ವರದಿ ಮಾಡುತ್ತಾರೆ. ಇವರ ವರದಿಗಳನ್ನು ಯಾವತ್ತೂ ಆಧಾರವಾಗಿ ತೆಗೆದುಕೊಳ್ಳಬಾರದು” ಎಂದು ಇಬ್ನ್ ಹಿಬ್ಬಾನ್ ಹೇಳುತ್ತಾರೆ. ಅದ್ದಾರಕುತ್ನಿ ಇವರನ್ನು ದುರ್ಬಲನೆಂದು ಘೋಷಿಸಿದ್ದಾರೆ. (ತಹ್ದೀಬುತ್ತಹ್ದೀಬ್ 5/201)

ಇಬ್ನ್ ಹಿಬ್ಬಾನ್ ತಮ್ಮ ‘ರೌದತುಲ್ ಉಕಲಾಅ್’ ಎಂಬ ಪುಸ್ತಕದಲ್ಲಿ (ಪುಟ 49) ಇದೇ ಕಥೆಯನ್ನು ಹೀಗೆ ಉದ್ಧರಿಸಿದ್ದಾರೆ:

ಅಮ್ರ್ ಇಬ್ನ್ ಮುಹಮ್ಮದ್ ಅಲ್‌ಅನ್ಸಾರಿ ನಮಗೆ ತಿಳಿಸಿದರು: ಅವರು ಅಲ್‌ಗಲ್ಲಾಬಿಯಿಂದ ನಮಗೆ ತಿಳಿಸಿದರು: ಅವರು ಇಬ್ರಾಹೀಂ ಇಬ್ನ್ ಅಮ್ರ್ ಇಬ್ನ್ ಹಬೀಬ್‌ರಿಂದ ನಮಗೆ ತಿಳಿಸಿದರು: ಅವರಲ್ಲಿ ಅಲ್‌ಅಸ್ಮಈ ಹೇಳಿದರು: ನಾನೊಮ್ಮೆ ಮರುಭೂಮಿಯಲ್ಲಿ ಪ್ರಯಾಣ ಮಾಡುತ್ತಿದ್ದಾಗ ಒಬ್ಬ ಮರುಭೂಮಿ ನಿವಾಸಿ

﴿مَّا يَلْفِظُ مِن قَوْلٍ إِلَّا لَدَيْهِ رَقِيبٌ عَتِيدٌ ﴿١٨﴾﴾

“ಆತ (ಮನುಷ್ಯ) ಏನೂ ಮಾತನಾಡುವುದಿಲ್ಲ; (ಅದನ್ನು ಬರೆದಿಡಲು) ಸಿದ್ಧವಾಗಿ ನಿಂತು ಕಾಯುತ್ತಿರುವ ಒಬ್ಬ ಮಲಕ್ ಆತನ ಬಳಿಯಿರುವ ಹೊರತು.” ...ಹೀಗೆ ಕಥೆ ಮುಂದುವರಿಯುತ್ತದೆ.

ಅಲ್‌ಗಲ್ಲಾಬಿ ಎಂಬ ಈ ವರದಿಗಾರನ ನಿಜ ನಾಮಧೇಯ ಮುಹಮ್ಮದ್ ಇಬ್ನ್ ಝಕರಿಯ್ಯಾ. ಇವರ ಮೇಲೆ ಆರೋಪವಿದೆ. ಇವರ ಬಗ್ಗೆ ಅದ್ದಾರಕುತ್ನಿ ಹೇಳುತ್ತಾರೆ: “ಇವರು ಹದೀಸ್‌ಗಳನ್ನು ಕೃತಕವಾಗಿ ನಿರ್ಮಿಸುತ್ತಾರೆ.” ಇಬ್ನ್ ಹಿಬ್ಬಾನ್ ಹೇಳುತ್ತಾರೆ: “ಇವರು ಅಜ್ಞಾತ ವ್ಯಕ್ತಿಗಳಿಂದ ವರದಿ ಮಾಡುವ ವರದಿಗಳಲ್ಲಿ ನಿಷೇಧಾತ್ಮಕ ಅಂಶಗಳಿವೆ.” (ಲಿಸಾನುಲ್ ಮೀಝಾನ್ 5/168)

ವಿಪರ್ಯಾಸವೇನೆಂದರೆ, ಈ ಕಥೆಯನ್ನು ಸಹ ಇವರು ತಮ್ಮ ಗುರು ಇಬ್ರಾಹೀಮ್ ಇಬ್ನ್ ಅಮ್ರ್ ಎಂಬ ಅಜ್ಞಾತ (ಮಜ್‌ಹೂಲ್) ವ್ಯಕ್ತಿಯಿಂದಲೇ ವರದಿ ಮಾಡಿದ್ದಾರೆ.

ಇದೇ ರೀತಿಯ ಕಥೆ ಅಬ್ದುಲ್ಲಾಹ್ ಇಬ್ನುಲ್ ಮುಬಾರಕ್(ﷺ) ರಿಂದಲೂ ವರದಿಯಾಗಿದೆ. ಆ ಕಥೆಯಲ್ಲಿ ಅವರು ಹೇಳುತ್ತಾರೆ: ನಾನೊಮ್ಮೆ ಹಜ್ಜ್ ನಿರ್ವಹಿಸಲು ತೆರಳಿದ್ದೆ. ಹೀಗೆ ನಾನು ಒಂದು ದಾರಿಯಲ್ಲಿ ಸಾಗುತ್ತಿದ್ದಾಗ ಒಂದು ಕಪ್ಪು ಆಕೃತಿಯನ್ನು ನೋಡಿದೆ. ನಾನು ಕಣ್ಣರಳಿಸಿ ನೋಡಿದಾಗ ಅಗೋ ಒಬ್ಬ ಮುದುಕಿ! ಆಕೆ ಉಣ್ಣೆಯಿಂದ ನಿರ್ಮಿಸಿದ ಅಂಗಿ ಮತ್ತು ಚಾದರವನ್ನು ಹೊದ್ದುಕೊಂಡಿದ್ದಳು. ನಾನು ಆಕೆಯ ಬಳಿಗೆ ಹೋಗಿ “ಅಸ್ಸಲಾಮು ಅಲೈಕುಂ ವರಹ್ಮತುಲ್ಲಾಹಿ ವಬರಕಾತುಹು” ಎಂದು ಹೇಳಿದೆ.

ಆಕೆ ಹೇಳಿದಳು:

﴿سَلَٰمٌ قَوْلًا مِّن رَّبٍّ رَّحِيمٍ ﴿٥٨﴾﴾

“ಸಲಾಮ್! ಇದು ದಯಾಳುವಾದ ರಬ್ಬಿನ ವತಿಯ ಮಾತಾಗಿದೆ.”

ನಾನು ಹೇಳಿದೆ: “ಅಲ್ಲಾಹು ತಮಗೆ ದಯೆ ತೋರಲಿ. ಈ ಸ್ಥಳದಲ್ಲಿ ತಾವೇನು ಮಾಡುತ್ತಿದ್ದೀರಿ?”

ಆಕೆ ಹೇಳಿದಳು:

وَمَنْ يُضْلِلْ فَلَا هَادِيَ لَهُ.

ಮಹಿಳೆ ಒಂಟಿಯಾಗಿ ಒಂಟೆಯ ಮೇಲೆ ಪ್ರಯಾಣ ಮಾಡುತ್ತಿರುವುದನ್ನು ಕಂಡೆ. ನಾನು ಕೇಳಿದೆ: “ತಾವು ಏನನ್ನು ಹುಡುಕುತ್ತಿದ್ದೀರಿ?” ಆಕೆ ಹೇಳಿದಳು:

مَنْ يَهْدِهِ اللَّهُ فَلَا مُضِلَّ لَهُ، وَمَنْ يُضْلِلْ فَلَا هَادِيَ لَهُ.

“ಅಲ್ಲಾಹು ಯಾರಿಗೆ ದಾರಿ ತೋರಿಸುತ್ತಾನೋ ಅವನನ್ನು ದಾರಿ ತಪ್ಪಿಸುವವರಾರೂ ಇಲ್ಲ. ಅಲ್ಲಾಹು ಯಾರನ್ನು ದಾರಿ ತಪ್ಪಿಸುತ್ತಾನೋ ಅವನನ್ನು ಸರಿದಾರಿಗೆ ತರುವವರಾರೂ ಇಲ್ಲ.”

ಆಕೆ ದಾರಿ ತಪ್ಪಿ ಇಲ್ಲಿಗೆ ಬಂದಿರಬಹುದೆಂದು ನನಗೆ ಅರಿವಾಯಿತು. ಇದನ್ನು ದೃಢಪಡಿಸಲು ನಾನು ಕೇಳಿದೆ: “ತಾವು ದಾರಿ ತಪ್ಪಿ ಬಂದಿದ್ದೀರಾ?”

ಆಕೆ ಹೇಳಿದಳು:

﴿فَفَهَّمْنَٰهَا سُلَيْمَٰنَ ۚ وَكُلًّا ءَاتَيْنَا حُكْمًا وَعِلْمًا ۚ﴾

“ಸುಲೈಮಾನ್ ಅದನ್ನು ಅರ್ಥ ಮಾಡಿಕೊಳ್ಳುವಂತೆ ನಾವು ಮಾಡಿದೆವು. ಅವರಿಬ್ಬರಿಗೂ ನಾವು ಅಧಿಕಾರ ಮತ್ತು ಜ್ಞಾನವನ್ನು ನೀಡಿದೆವು.”

ನಾನು ಕೇಳಿದೆ: “ಓ ಮಹಾತಾಯಿ! ತಾವು ಎಲ್ಲಿಯವರು?”

ಆಕೆ ಹೇಳಿದಳು:

﴿سُبْحَٰنَ ٱلَّذِىٓ أَسْرَىٰ بِعَبْدِهِۦ لَيْلًا مِّنَ ٱلْمَسْجِدِ ٱلْحَرَامِ إِلَى ٱلْمَسْجِدِ ٱلْأَقْصَا﴾

“ರಾತ್ರಿಯಲ್ಲಿ ತನ್ನ ದಾಸನನ್ನು ಮಸ್ಜಿದುಲ್ ಹರಾಂನಿಂದ ಮಸ್ಜಿದುಲ್ ಅಕ್ಸಾಕ್ಕೆ ನಿಶಾ ಪ್ರಯಾಣ ಮಾಡಿಸಿದವನು ಪರಮಪಾವನನು.”

ಆಕೆ ಮಕ್ದಿಸಿ (ಅಕ್ಸಾ ನಿವಾಸಿ) ಎಂದು ನನಗೆ ಖಾತ್ರಿಯಾಯಿತು. ನಾನು ಕೇಳಿದೆ: “ತಾವೇಕೆ ಮಾತನಾಡುವುದಿಲ್ಲ?” ಆಕೆ ಹೇಳಿದಳು:

“ಅಲ್ಲಾಹು ಯಾರನ್ನು ದಾರಿ ತಪ್ಪಿಸುತ್ತಾನೋ ಅವನನ್ನು ಸರಿದಾರಿಗೆ ತರುವವರಾರೂ ಇಲ್ಲ.”

ಆಕೆ ದಾರಿ ತಪ್ಪಿ ಬಂದವಳೆಂದು ನನಗೆ ಮನವರಿಕೆಯಾಯಿತು. ನಾನು ಕೇಳಿದೆ: “ತಮಗೆ ಎತ್ತ ಹೋಗಬೇಕು?” ಆಕೆ ಹೇಳಿದಳು:

﴿سُبْحَٰنَ ٱلَّذِىٓ أَسْرَىٰ بِعَبْدِهِۦ لَيْلًا مِّنَ ٱلْمَسْجِدِ ٱلْحَرَامِ إِلَى ٱلْمَسْجِدِ ٱلْأَقْصَا﴾

“ರಾತ್ರಿಯಲ್ಲಿ ತನ್ನ ದಾಸನನ್ನು ಮಸ್ಜಿದುಲ್ ಹರಾಂನಿಂದ ಮಸ್ಜಿದುಲ್ ಅಕ್ಸಾಕ್ಕೆ ನಿಶಾ ಪ್ರಯಾಣ ಮಾಡಿಸಿದವನು ಪರಮಪಾವನನು.”

ಆಕೆ ಹಜ್ಜ್ ಪೂರ್ತಿ ಮಾಡಿ ಬೈತುಲ್ ಮುಕದ್ದಸ್‌ಗೆ ಮರಳುವವಳೆಂದು ನನಗೆ ಮನವರಿಕೆಯಾಯಿತು. ....ಹೀಗೆ ಕಥೆ ಮುಂದುವರಿಯುತ್ತದೆ.

ಇಬ್ನುಲ್ ಮುಬಾರಕ್(ﷺ) ಈ ಕಥೆಯನ್ನು ವರದಿ ಮಾಡಿದ್ದಾರೆಂಬುದಕ್ಕೆ ಯಾವುದೇ ಆಧಾರವನ್ನೂ ನಾವು ಕಂಡಿಲ್ಲ. ಶೈಖ್ ಅಬ್ದುಲ್ ಅಝೀಝ್ ಅಸ್ಸದ್‌ಹಾನ್ ತಮ್ಮ ‘ಕುತುಬ್, ಅಖ್ಬಾರ್, ರಿಜಾಲ್, ಅಹಾದೀಸ್ : ತಹ್ತಲ್ ಮಿಜ್‌ಹರ್’ ಎಂಬ ಪುಸ್ತಕದಲ್ಲಿ (ಪುಟ 73) ಹೇಳುತ್ತಾರೆ:

“ಅನೇಕ ಕಾರಣಗಳಿಂದಾಗಿ ಈ ಕಥೆ ಸುಳ್ಳೆಂದು ಸಾಬೀತಾಗುತ್ತದೆ:

1. ಇಬ್ನುಲ್ ಮುಬಾರಕ್‌ರ ಜೀವನ ಚರಿತ್ರೆಯನ್ನು ಬರೆದವರಲ್ಲಿ ಹೆಚ್ಚಿನವರೂ ಈ ಕಥೆಯನ್ನು ಉದ್ಧರಿಸಿಲ್ಲ.

2. ಈ ಕಥೆಗೆ ಯಾವುದೇ ಲಂಗು–ಲಗಾಮಿಲ್ಲ. ಇದಕ್ಕೆ ಸನದ್ ಕೂಡ ಇಲ್ಲ.

3. ಕುರ್‌ಆನಿನಲ್ಲಿ ಮಾತನಾಡುವುದನ್ನು ಈ ಕಥೆಯಲ್ಲಿ ಇಬ್ನುಲ್ ಮುಬಾರಕ್(ﷺ) ವಿರೋಧಿಸುವುದಿಲ್ಲ. ವಿದ್ವಾಂಸರಲ್ಲಿ ಬಹುಪಾಲು ಮಂದಿ ಕುರ್‌ಆನಿನಲ್ಲಿ ಮಾತನಾಡುವುದನ್ನು ವಿರೋಧಿಸಿದ್ದಾರೆ. ಇಬ್ನುಲ್ ಮುಬಾರಕ್(ﷺ) ಸುನ್ನತ್ತನ್ನು ಹಿಂಬಾಲಿಸುವುದರಲ್ಲಿ ಅಗ್ರಗಣ್ಯರೆಂದು ಖ್ಯಾತಿ ಪಡೆದವರು. ಹೀಗಿರುವಾಗ ಅವರು ಇಲ್ಲಿ ಇದನ್ನು ವಿರೋಧಿಸದಿರುವುದು ಸೋಜಿಗವಾಗಿದೆ.

4. ಇದರಲ್ಲಿರುವ ಸಂಭಾಷಣೆ ಸ್ವಯಂ ನಿರ್ಮಿಸಿದ್ದೆಂದು ಕಂಡು ಬರುತ್ತದೆ. ಈ ಕಥೆ ಸುಳ್ಳೆನ್ನುವುದಕ್ಕೆ ಇದೂ ಒಂದು ಕಾರಣವಾಗಿದೆ.”

ಎರಡನೆಯದಾಗಿ, ಕುರ್‌ಆನಿನಲ್ಲಿ ಮಾತನಾಡುವುದು ಧರ್ಮಸಮ್ಮತವಲ್ಲ. ಏಕೆಂದರೆ ಕುರ್‌ಆನ್ ಅಲ್ಲಾಹನ ಮಾತು. ಅವನದನ್ನು ಸನ್ಮಾರ್ಗ, ಕಾರುಣ್ಯ ಮತ್ತು ಉಪಶಮನವಾಗಿ ಅವತೀರ್ಣಗೊಳಿಸಿದ್ದಾನೆ. ಅದನ್ನು ಪಾರಾಯಣ ಮಾಡುವುದು ಮತ್ತು ಅದರ ಪ್ರಕಾರ ಕಾರ್ಯವೆಸಗುವುದು ಆರಾಧನೆ (ಇಬಾದತ್) ಯಾಗಿದೆ.

ಅದು ಅಲ್ಲಾಹನ ಮಾತಾಗಿರುವುದರಿಂದ ಮನುಷ್ಯರು ಅದನ್ನು ತಮ್ಮ ಮಾತುಗಳನ್ನಾಗಿ ಮಾಡುವುದಕ್ಕೆ ಅಥವಾ ಐಹಿಕ ಅಗತ್ಯಗಳನ್ನು ಸೂಚಿಸುವುದಕ್ಕೆ ಮಾಧ್ಯಮವನ್ನಾಗಿ ಮಾಡುವುದಕ್ಕೆ ಅನುಮತಿಯಿಲ್ಲ. ವಿದ್ವಾಂಸರು ಹೀಗೆಯೇ ಫತ್ವಾ ನೀಡಿದ್ದಾರೆ.

‘ತಲ್ಬೀಸ್ ಇಬ್ಲೀಸ್’ ಎಂಬ ಪುಸ್ತಕದಲ್ಲಿ (ಪುಟ 141) ಹೀಗೆ ಹೇಳಲಾಗಿದೆ:

“ಇಬ್ನ್ ಉಕೈಲ್ ಹೇಳುತ್ತಾರೆ: ಅಬೂ ಇಸ್‌ಹಾಕ್ ಅಲ್‌ಖರ್‍ರಾಝ್ ಬಹಳ ದೊಡ್ಡ ಸಾತ್ವಿಕರಾಗಿದ್ದರು. ನನಗೆ ಕುರ್‌ಆನನ್ನು ಕಲಿಸಿಕೊಟ್ಟವರಲ್ಲಿ ಅವರು ಮೊದಲಿಗರು. ಅವರು ರಮದಾನ್ ತಿಂಗಳಲ್ಲಿ ಮೌನವಾಗಿರುತ್ತಿದ್ದರು. ಇದನ್ನು ಅವರು ರೂಢಿ ಮಾಡಿಕೊಂಡಿದ್ದರು. ಏನಾದರೂ ಹೇಳಬೇಕಾಗಿ ಬಂದರೆ ಅವರು ಕುರ್‌ಆನಿನ ಆಯತ್‌ಗಳ ಮೂಲಕ ಅದನ್ನು ವ್ಯಕ್ತಪಡಿಸುತ್ತಿದ್ದರು. ಉದಾಹರಣೆಗೆ, ಯಾರಾದರೂ ಒಳಗೆ ಬರಲು ಅನುಮತಿ ಕೇಳಿದರೆ ಅವರು ಹೇಳುತ್ತಿದ್ದರು:

﴿ٱدْخُلُوا۟ عَلَيْهِمُ ٱلْبَابَ﴾

“ನೀವು ಆ ಬಾಗಿಲಿನ ಮೂಲಕ ಅವರ ಬಳಿಗೆ ಪ್ರವೇಶಿಸಿರಿ.”

ಉಪವಾಸದ ದಿನ ಸಂಜೆಯಾಗುವಾಗ ಅವರು ಹೇಳುತ್ತಿದ್ದರು:

﴿مِنۢ بَقْلِهَا وَقِثَّآئِهَا﴾

“ಕೆಲವು ಸೊಪ್ಪು ಮತ್ತು ಸೌತೆ.” ಅಂದರೆ ಇವುಗಳನ್ನು ಖರೀದಿಸಿ ತಾ ಎಂದರ್ಥ!!

ನಾನು ಅವರಲ್ಲಿ ಹೇಳಿದೆ: “ಯಾವುದನ್ನು ನೀವು ಇಬಾದತ್ (ಆರಾಧನೆ) ಎಂದು ನಂಬುತ್ತಿರುವಿರೋ ಅದು ವಾಸ್ತವದಲ್ಲಿ ದೇವಧಿಕ್ಕಾರವಾಗಿದೆ!!”

ಅವರಿಗೆ ನನ್ನ ಮಾತನ್ನು ನುಂಗಲು ಕಷ್ಟವಾಯಿತು. ನಾನು ಹೇಳಿದೆ: “ಅಲ್ಲಾಹು ಈ ಕುರ್‌ಆನನ್ನು ಅವತೀರ್ಣಗೊಳಿಸಿರುವುದು ಶರೀಅತ್ತಿನ ನಿಯಮಗಳನ್ನು ವಿವರಿಸುವುದಕ್ಕೆ. ಇದನ್ನು ಐಹಿಕ ಉದ್ದೇಶಗಳಿಗೆ ಬಳಸಬಾರದು. ಇದು ನೀವು ಮುಸ್‌ಹಫಿನ ಕಾಗದವನ್ನು ಹಲ್ಲುಜ್ಜಲು ಬಳಸುವುದಕ್ಕೆ ಸಮ. ಅಥವಾ ಮಲಗಲು ಮುಸ್‌ಹಫನ್ನು ದಿಂಬನ್ನಾಗಿ ಮಾಡಿಕೊಳ್ಳುವುದಕ್ಕೆ ಸಮ.”

ಇದನ್ನು ಕೇಳಿ ಅವರು ನನ್ನಿಂದ ಮುಖ ತಿರುಗಿಸಿದರು. ನನ್ನ ಮಾತನ್ನು ಖಂಡಿಸಲು ಅವರಲ್ಲಿ ಯಾವುದೇ ಪುರಾವೆಯಿರಲಿಲ್ಲ.”

ಇಬ್ನ್ ಕುದಾಮ(ﷺ) ಹೇಳುತ್ತಾರೆ:

“ನಾವಾಡುವ ಮಾತುಗಳಿಗೆ ಬದಲಿಯಾಗಿ ಕುರ್‌ಆನನ್ನು ಬಳಸುವುದಕ್ಕೆ ಅನುಮತಿಯಿಲ್ಲ. ಇದು ಕುರ್‌ಆನನ್ನು ಯಾವುದಕ್ಕೆ ಬಳಸಬೇಕೋ ಅದನ್ನು ಬಿಟ್ಟು ಬೇರೆ ಉದ್ದೇಶಕ್ಕೆ ಬಳಸುವುದಕ್ಕೆ ಸಮವಾಗಿದೆ. ಇದು ಮುಸ್‌ಹಫನ್ನು ದಿಂಬನ್ನಾಗಿ ಮಾಡಿಕೊಂಡು ಮಲಗುವುದಕ್ಕೆ ಸಮವಾಗಿದೆ.

ಹೀಗೆ ವರದಿಯಾಗಿದೆ: “ಅಲ್ಲಾಹನ ಗ್ರಂಥವನ್ನು ಹಿಡಿದು ತರ್ಕ ಮಾಡಬೇಡಿ.”

ಅಂದರೆ ಅದರ ಅರ್ಥ, ಏನಾದರೂ ಕಂಡರೆ ಕುರ್‌ಆನಿನ ಮೂಲಕ ಮಾತನಾಡಬೇಡಿ. ಉದಾಹರಣೆಗೆ ಒಬ್ಬ ವ್ಯಕ್ತಿ ಸರಿಯಾದ ಸಮಯದಲ್ಲಿ ಬಂದರೆ




“ನಂತರ ಓ ಮೂಸಾ! ತಾವು ನಿರ್ಣಯದ ಪ್ರಕಾರವೇ ಬಂದಿರುವಿರಿ.”

ಎಂದು ಹೇಳಬಾರದು. ಅಬೂ ಉಬೈದ್ ಕೂಡ ಇದೇ ಅರ್ಥವನ್ನು ಹೇಳಿದ್ದಾರೆ.” (ಮುಗ್ನಿ 3/77)

ಅಲ್‌ಬಹೂತಿ(ﷺ) ಹೇಳುತ್ತಾರೆ: “ಮನುಷ್ಯರು ತಮ್ಮ ಮಾತಿಗೆ ಬದಲು ಕುರ್‌ಆನನ್ನು ಬಳಸುವುದಕ್ಕೆ ಅನುಮತಿಯಿಲ್ಲ. ಉದಾಹರಣೆಗೆ ಒಬ್ಬ ವ್ಯಕ್ತಿ ತನ್ನದೇ ಸಮಯಕ್ಕೆ ಬಂದರೆ




“ನಂತರ ಓ ಮೂಸಾ! ತಾವು ನಿರ್ಣಯದ ಪ್ರಕಾರವೇ ಬಂದಿರುವಿರಿ” ಎಂದು ಹೇಳುವುದು.” (ಕಶ್ಶಾಫುಲ್ ಕನಾಅ್ 1/434)

ಶೈಖ್ ಇಬ್ನ್ ಉಸೈಮೀನ್(ﷺ) ಹೇಳುತ್ತಾರೆ:

“ವಿದ್ವಾಂಸರು ಹೇಳುತ್ತಾರೆ: ಮನುಷ್ಯರು ತಮ್ಮ ಮಾತಿಗೆ ಬದಲಾಗಿ ಕುರ್‌ಆನನ್ನು ಬಳಸುವುದು ನಿಷಿದ್ಧ. ನಾನು ವಿದ್ಯಾರ್ಥಿಯಾಗಿದ್ದಾಗ ಜವಾಹರುಲ್ ಅದಬ್ ಎಂಬ ಗ್ರಂಥದಲ್ಲಿ ಕುರ್‌ಆನಿನಲ್ಲಿ ಮಾತನಾಡುವ ಮಹಿಳೆಯ ಬಗ್ಗೆ ಓದಿದ್ದೆ. ಈಕೆಯನ್ನು ಕಂಡು ಜನರು ಅಚ್ಚರಿಪಡುತ್ತಿದ್ದರಂತೆ. ಕೆಲವರು— ಆಕೆ ತನ್ನ ಮಾತಿನಲ್ಲಿ ಏನಾದರೂ ತಪ್ಪು ಸಂಭವಿಸಿ ರಹ್ಮಾನನಾದ ಅಲ್ಲಾಹು ಕೋಪಿಸುವನು ಎಂಬ ಭಯದಿಂದ ಕಳೆದ ನಲ್ವತ್ತು ವರ್ಷಗಳಿಂದ ಕುರ್‌ಆನ್ ಅಲ್ಲದೆ ಬೇರೇನನ್ನೂ ಮಾತನಾಡಿಲ್ಲವೆಂದು ಹೇಳುತ್ತಿದ್ದರಂತೆ.

ನಾವು ಹೇಳುತ್ತೇವೆ: ಆಕೆಗೆ ತಪ್ಪು ಸಂಭವಿಸಿದೆ. ಕುರ್‌ಆನನ್ನು ಮಾತಿಗೆ ಬದಲಿಯಾಗಿ ಮಾಡಿಕೊಳ್ಳಬಾರದು. ಆದರೆ ಯಾವುದಾದರೂ ಘಟನೆ ಸಂಭವಿಸಿದರೆ ಕುರ್‌ಆನನ್ನು ಸಾಕ್ಷಿಯಾಗಿ ಮಾಡಿಕೊಳ್ಳುವುದರಲ್ಲಿ ತಪ್ಪಿಲ್ಲ. ಉದಾಹರಣೆಗೆ ಒಮ್ಮೆ ಪ್ರವಾದಿಯವರು (ﷺ) ಖುತುಬ ನಿರ್ವಹಿಸುತ್ತಿದ್ದಾಗ ಮೊಮ್ಮಕ್ಕಳಾದ ಹಸನ್ ಮತ್ತು ಹುಸೈನ್ ಮನೆಯಿಂದ ಹೊರಗೆ ಬಂದರು. ಅವರು ಪ್ರವಾದಿಯವರ (ﷺ) ಎದುರಿಗೆ ನಿಂತು ತಮ್ಮ ಅಂಗಿಯನ್ನು ಹಿಡಿದು ಅಲ್ಲಾಡಿಸುತ್ತಿದ್ದರು. ಇದನ್ನು ಕಂಡು ಪ್ರವಾದಿಯವರು(ﷺ) ಮಿಂಬರಿನಿಂದ ಇಳಿದು ಬಂದು ಅವರನ್ನು ಎತ್ತಿಕೊಳ್ಳುತ್ತಾ ಹೇಳಿದರು: ಅಲ್ಲಾಹು ಸತ್ಯವನ್ನೇ ಹೇಳಿದ್ದಾನೆ. ಖಂಡಿತವಾಗಿಯೂ ನಿಮ್ಮ ಸಂಪತ್ತು ಮತ್ತು ಸಂತಾನ ಒಂದು ಪರೀಕ್ಷೆಯಾಗಿದೆ. (ಕುರ್‌ಆನ್ 64:15)

ಹೀಗೆ ಯಾವುದಾದರೂ ಘಟನೆ ಸಂಭವಿಸುವಾಗ ಆ ಘಟನೆ ನೂರಕ್ಕೆ ನೂರು ಕುರ್‌ಆನಿನ ಆಯತ್ತಿನೊಂದಿಗೆ ತಾಳೆಯಾಗುವುದಾದರೆ ಅದನ್ನು ವ್ಯಕ್ತಪಡಿಸಲು ಕುರ್‌ಆನಿನ ಆಯತ್ತನ್ನು ಹೇಳುವುದರಲ್ಲಿ ತೊಂದರೆಯಿಲ್ಲ.” (ಅಶ್ಶರ್ಹುಲ್ ಮುಮ್ತಿಅ್ 6/531)

ಹೆಚ್ಚು ಬಲ್ಲವನು ಅಲ್ಲಾಹು. ■

# ಶಿಯಾಗಳು ಮತ್ತು ತೌಹೀದ್

ಶಿಯಾಗಳು ಅಲ್ಲಾಹನೊಂದಿಗೆ ಮಾತ್ರ ಮಾಡಬೇಕಾದ ಸಹಾಯಯಾಚನೆಯನ್ನು ಇಮಾಮರುಗಳೊಂದಿಗೆ ಮಾಡುವವರಾಗಿದ್ದಾರೆ. ಬಿಹಾರುಲ್ ಅನ್ವಾರ್‌ನಲ್ಲಿ ರೋಗಶಮನವನ್ನು ಅರಸುವವರಿಗೆ ಇಮಾಮರುಗಳು ಅತ್ಯುತ್ತಮ ರೋಗಶಮನ ಮತ್ತು ಔಷಧಿಯಾಗಿದ್ದಾರೆಂದು ಬರೆಯಲಾಗಿದೆ. ಮಾತ್ರವಲ್ಲದೆ ವಿವಿಧ ಸಂಕಷ್ಟಗಳ ಸಮಯದಲ್ಲಿ ಕರೆದು ಪ್ರಾರ್ಥಿಸಬೇಕಾದ ಇಮಾಮರುಗಳ ಪಟ್ಟಿಯನ್ನೇ ಆ ಗ್ರಂಥದಲ್ಲಿ ವಿವರಿಸಲಾಗಿದೆ.

**ತೌಹೀದುರ್ರುಬೂಬಿಯ್ಯತ್ ಮತ್ತು ಶಿಯಾಗಳು:**

ಸೃಷ್ಟಿ, ಒಡೆತನ, ನಿಯಂತ್ರಣ ಎಂಬ ಅಲ್ಲಾಹನ ಪ್ರವೃತ್ತಿಗಳಲ್ಲಿ ಅವನನ್ನು ಏಕನಾಗಿಸುವುದು ತೌಹೀದುರ್ರುಬೂಬಿಯ್ಯತ್ ಆಗಿದೆ. ಅದು ಸೃಷ್ಟಿ, ಪರಿಪಾಲನೆ, ಅನ್ನದಾತ, ಜೀವಿಸುವಂತೆ ಮಾಡುವವನು, ಮೃತಪಡಿಸುವವನು ಹಾಗೂ ನಿಯಂತ್ರಿಸುವವನು ಅಲ್ಲಾಹನಾಗಿದ್ದಾನೆ ಎಂಬ ಓರ್ವ ದಾಸನ ವಿಶ್ವಾಸವಾಗಿದೆ. ಅದರಲ್ಲಿ ಅಲ್ಲಾಹುವಿಗೆ ಯಾವುದೇ ಭಾಗೀದಾರರು ಅಥವಾ ಸಮಾನರಿಲ್ಲ.

ಆದರೆ ಈ ಮೂಲಭೂತ ವಿಷಯಗಳಲ್ಲಿ ಶಿಯಾಗಳ ವಿಶ್ವಾಸ ಹೇಗಿದೆ? ಅಲ್ಲಾಹನ ಒಡೆತನದಲ್ಲಿ ತಮ್ಮ ಇಮಾಮರುಗಳನ್ನು ಪಾಲುಗೊಳಿಸುವ ಶಿಯಾ ವಿಶ್ವಾಸಗಳ ಕೆಲವು ಉದಾಹರಣೆಗಳನ್ನು ನೋಡಿರಿ.

1. ಇಮಾಮ್ ರಬ್ಬ್ ಎಂಬ ವಿಶ್ವಾಸ:

   ಪವಿತ್ರ ಕುರ್‌ಆನಿನ ಸೂರತುಲ್ ಕಹ್ಫ್‌ನ 110ನೇ ಸೂಕ್ತದಲ್ಲಿ ಹೀಗಿದೆ:




“...ಆರಾಧನೆಯಲ್ಲಿ ತನ್ನ ಪ್ರಭುವಿನೊಂದಿಗೆ ಯಾರನ್ನೂ ಸಹಭಾಗಿಯಾಗಿ ಮಾಡದಿರಲಿ.”

ಆದರೆ ಶಿಯಾ ಇಮಾಮ್ ಮತ್ತು ಮುಫಸ್ಸಿರ್ ಆದ ಅಯ್ಯಾಶ್‌ರವರ ತಫ್ಸೀರುಲ್ ಅಯ್ಯಾಶ್‌ನಲ್ಲಿ ಈ ಆಯತ್‌ಗೆ ನೀಡಿದ ಅರ್ಥ ಹೀಗಿದೆ:

“ಅಥವಾ ಖಿಲಾಫತ್ ಅಲಿಯ್ಯ್ ರಿಗೆ ಸಮರ್ಪಿಸಿರಿ. ಖಿಲಾಫತ್ ಇಲ್ಲದವನು ಮತ್ತು ಅದರ ಅರ್ಹತೆ ಇಲ್ಲದವನನ್ನು ಅದರಲ್ಲಿ ಅಲಿಯ್ಯ್ ರೊಂದಿಗೆ ಪಾಲುಗೊಳಿಸಬಾರದು.”

ಶಿಯಾಧರ್ಮವು ಇಲ್ಲಿ ಅಲ್ಲಾಹನಿಗಿರುವ ಪ್ರತ್ಯೇಕವಾದ ರಬ್ಬ್ ಎಂಬ ನಾಮವನ್ನು ಇಮಾಮ್‌ಗೆ ನೀಡಿ ಇಬಾದತ್ತನ್ನು ಖಿಲಾಫತ್ ಎಂದು ದುರ್ವ್ಯಾಖ್ಯಾನಿಸುತ್ತದೆ.

2. ಇಹಲೋಕ ಮತ್ತು ಪರಲೋಕ ಇಮಾಮರ ಹಸ್ತದಲ್ಲಿದೆ ಎಂಬ ವಿಶ್ವಾಸ :

ಶಿಯಾಗಳ ಅತ್ಯಂತ ಅಧಿಕೃತ ಗ್ರಂಥವಾದ ‘ಅಲ್‌ಕಾಫಿ’ಯಲ್ಲಿ “ಸಮಗ್ರ ಭೂಮಿ ಇಮಾಮ್‌ಗೆ” ಎಂಬ ಒಂದು ಅಧ್ಯಾಯವೇ ಇದೆ. ಈ ಅಧ್ಯಾಯದ ಕೆಳಗೆ ಅಬೂ ಅಬ್ದಿಲ್ಲಾ ಹೇಳಿರುವುದಾಗಿ

ಹೀಗೆ ಉಲ್ಲೇಖವಿದೆ.

“ಇಹಲೋಕ ಮತ್ತು ಪರಲೋಕ ಇಮಾಮರಿಗಾಗಿದೆಯೆಂದು ನಿಮಗೆ ತಿಳಿದಿಲ್ಲವೇ? ಇಮಾಮ್ ಇಚ್ಛಿಸಿದಲ್ಲಿ ಅದನ್ನಿಡುತ್ತಾನೆ. ಇಮಾಮ್ ಇಚ್ಛಿಸಿದವರಿಗೆ ಅದನ್ನು ನೀಡುತ್ತಾನೆ. ಅದಕ್ಕೆ ಅಲ್ಲಾಹನಿಂದ ಇಮಾಮರಿಗೆ ಅನುಮತಿ ಇದೆ.”

ಇದರ ಮೂಲಕ ರುಬೂಬಿಯ್ಯತ್‌ನಲ್ಲಿ ಅಲ್ಲಾಹನೊಂದಿಗೆ ಭಾಗೀದಾರರನ್ನು ನಿಶ್ಚಯಿಸುವ ಕಾರ್ಯ ಸಂಭವಿಸುತ್ತದೆ. ಪ್ರಸ್ತುತ ವಿಶ್ವಾಸವು ಪವಿತ್ರ ಕುರ್‌ಆನಿನ ಹಲವಾರು ವಚನಗಳಿಗೆ ವಿರುದ್ಧವಾಗಿದೆ. ಇಹಲೋಕ, ಪರಲೋಕ, ಭೂಮ್ಯಾಕಾಶಗಳೆಲ್ಲವೂ ಅಲ್ಲಾಹನಿಗೆ ಮಾತ್ರ ಸೇರಿದವುಗಳಾಗಿ ಸ್ಪಷ್ಟಪಡಿಸುವ ಕೆಲವು ವಚನಗಳನ್ನು ನೋಡಿರಿ.



“ಈ ಲೋಕ ಮತ್ತು ಪರಲೋಕದ ಒಡೆಯನು ಅಲ್ಲಾಹನೇ ಆಗಿರುತ್ತಾನೆ.” (53:25)



“ಭೂಮ್ಯಾಕಾಶಗಳು ಮತ್ತು ಅವುಗಳಲ್ಲಿರುವುದೆಲ್ಲರ ಆಧಿಪತ್ಯವು ಅಲ್ಲಾಹನದ್ದಾಗಿದೆ. ಅವನೆಡೆಗೇ ಮರಳಲಿಕ್ಕಿದೆ.” (5:18)

3. ಪ್ರಪಂಚದ ಆಗು-ಹೋಗುಗಳು ಇಮಾಮರ ಆಜ್ಞೆ ಪ್ರಕಾರ ನಡೆಯುತ್ತದೆ ಎಂಬ ವಿಶ್ವಾಸ :

ಶಿಯಾ ಇಮಾಮರಾದ ಮಜ್ಲಿಸಿ ತಮ್ಮ ಬಿಹಾರುಲ್ ಅನ್ವಾರ್ ಎಂಬ ಗ್ರಂಥದಲ್ಲಿ ಬರೆಯುತ್ತಾರೆ:

ಸಮಾಅ ಇಬ್ನ್ ಮಹ್ರಾನ್ ಹೇಳಿರುವುದಾಗಿ ನಿವೇದನೆ. ನಾನು ಅಬೂ ಅಬ್ದುಲ್ಲಾರ ಜೊತೆಯಲ್ಲಿದ್ದೆ. ಆಗ ಆಕಾಶದಲ್ಲಿ ಸಿಡಿಲು ಮಿಂಚು ಉಂಟಾಯಿತು. ಅಬೂ ಅಬ್ದುಲ್ಲಾ ಹೇಳಿದರು. “ಈ ಸಿಡಿಲು ಮತ್ತು ಮಿಂಚು ನಿಮ್ಮ ಸ್ವಹಾಬತ್‌ನ ಆಜ್ಞೆ ಪ್ರಕಾರ ಉಂಟಾಗುತ್ತದೆ.” ನಾನು ಕೇಳಿದೆ: “ನಮ್ಮ ಸ್ವಹಾಬತ್ ಯಾರು?” ಅವರು ಹೇಳುತ್ತಾರೆ: “ಅಮೀರುಲ್ ಮುಅ್‌ಮಿನೀನ್.”

ಅಮೀರುಲ್ ಮುಅ್‌ಮಿನೀನ್ ಅಲಿಯ್ಯ್ ರವರ ಆಜ್ಞೆ ಪ್ರಕಾರವಾಗಿದೆಯೆಂದು ಇಲ್ಲಿಯ ಉದ್ದೇಶವಾಗಿದೆ. ಉತ್ತರಿಸುವ ಅಬೂ ಅಬ್ದಿಲ್ಲಾ ಇಮಾಮ್ ಜಅ್‌ಫರ್ ಸ್ವಾದಿಕ್ ಆಗಿದ್ದಾರೆ. ವಾಸ್ತವದಲ್ಲಿ ಅಲಿಯ್ಯ್ ಮತ್ತು ಜಅ್‌ಫರ್ ಸ್ವಾದಿಕ್ ಈ ಎಲ್ಲಾ ಅಸಂಬದ್ಧತೆಗಳಿಂದ ಹೊಣೆಮುಕ್ತರು.

ಏಕೆಂದರೆ ಇದರ ಮೂಲಕ ಅಲ್ಲಾಹನ ರುಬೂಬಿಯ್ಯತ್ ಅಥವಾ ಪರಿಪಾಲಕತ್ವದಲ್ಲಿ ಭಾಗೀದಾರರನ್ನು ನಿಶ್ಚಯಿಸುವ ಕೆಲಸ ನಡೆಯುತ್ತದೆ. ಮಜ್ಲಿಸಿಯಂತವರು ಇಂತಹ ಅಪರಾಧಗಳನ್ನು ಅವರ ಮೇಲೆ ಹೊರಿಸುತ್ತಿದ್ದಾರೆ ಅಷ್ಟೆ. ಮಿಂಚು ಮತ್ತು ಸಿಡಿಲು ಅಲ್ಲಾಹನ ಆಜ್ಞೆ ಪ್ರಕಾರವೇ ಉಂಟಾಗುತ್ತದೆ.

4. ಇಮಾಮರು ಗೈಬ್ ತಿಳಿಯುತ್ತಾರೆ ಎಂಬ ವಿಶ್ವಾಸ :

ಅಲ್‌ಕಾಫಿಯಲ್ಲಿ ಇಂತಹ ಶೀರ್ಷಿಕೆಗಳಿರುವ ಅಧ್ಯಾಯಗಳನ್ನು ಕಾಣಬಹುದು:

“ತಾವು ಯಾವಾಗ ಮೃತಪಡುತ್ತೇವೆಂದು ಇಮಾಮರಿಗೆ ತಿಳಿದಿದೆ.”

“ಉಂಟಾದದ್ದು ಮತ್ತು ಉಂಟಾಗಲಿರುವುದನ್ನು ಇಮಾಮರುಗಳು ಅರಿಯಬಲ್ಲರು.”

“ಅವರಿಗೆ ಯಾವುದೂ ಗೋಪ್ಯವಲ್ಲ.”

ಒಂದು ಅಧ್ಯಾಯದಲ್ಲಿ ಒಂದು ವರದಿಯನ್ನು ಸುಳ್ಳಾಗಿ ಅಬೂ ಅಬ್ದಿಲ್ಲಾರೊಂದಿಗೆ ಜೋಡಿಸಿ ಹೀಗೆ ಹೇಳಲಾಗಿದೆ:

“ಅಲ್ಲಾಹನಾಣೆಗೂ ಸತ್ಯ, ನಮಗೆ ಪೂರ್ವಿಕರು ಮತ್ತು ನಂತರದ ಪೀಳಿಗೆಯವರ ಜ್ಞಾನವು ನೀಡಲ್ಪಟ್ಟಿದೆ.” ಆಗ ಅವರೊಂದಿಗೆ ಅನುಚರರೊಬ್ಬರು ಕೇಳಿದರು: “ನಿಮಗೆ ಅದೃಶ್ಯಜ್ಞಾನವಿದೆಯೇ?” ಇಮಾಮ್ ಉತ್ತರಿಸಿದರು: “ನಿಮಗೆ ವಿನಾಶವಿರಲಿ. ನಿಶ್ಚಯವಾಗಿಯೂ ನಾನು ಪುರುಷರ ಬೆನ್ನಲ್ಲಿರುವುದು ಮತ್ತು ಸ್ತ್ರೀಯರ ಉದರದಲ್ಲಿರುವುದನ್ನು ಅರಿಯುತ್ತೇನೆ.”

ಇದು ಅದೃಶ್ಯಜ್ಞಾನವು ಅಲ್ಲಾಹನಿಗೆ ಮಾತ್ರವಿದೆಯೆಂದು ಸ್ಪಷ್ಟಪಡಿಸುವ ಕೆಲವು ವಚನಗಳಿಗೆ ತದ್ವಿರುದ್ಧವಾದ ವಿಶ್ವಾಸವಾಗಿದೆ.

﴿قُل لَّا يَعْلَمُ مَن فِي ٱلسَّمَٰوَٰتِ وَٱلْأَرْضِ ٱلْغَيْبَ إِلَّا ٱللَّهُ ۚ وَمَا يَشْعُرُونَ أَيَّانَ يُبْعَثُونَ ﴿٦٥﴾﴾

"(ಪ್ರವಾದಿಯವರೇ,) ಹೇಳಿರಿ. ಭೂಮ್ಯಾಕಾಶಗಳಲ್ಲಿ ಪರೋಕ್ಷದ ಜ್ಞಾನವುಳ್ಳವರು ಅಲ್ಲಾಹನ ಹೊರತು ಯಾರೂ ಇಲ್ಲ. ಮತ್ತು ಅವರಿಗಂತೂ ಅವರು ಯಾವಾಗ ಎಬ್ಬಿಸಲ್ಪಡುವರೆಂಬುದೂ ತಿಳಿದಿಲ್ಲ." (27:65)

ಪ್ರವಾದಿ ಮುಹಮ್ಮದ್(ﷺ) ರ ವಿಷಯದ ತನಕ ಅಲ್ಲಾಹು ಹೇಳುವುದನ್ನು ನೋಡಿರಿ.

﴿وَلَآ أَعْلَمُ ٱلْغَيْبَ﴾

"...ನಾನು ಪರೋಕ್ಷ ಜ್ಞಾನಿಯೆಂದು ಹೇಳುವುದಿಲ್ಲ." (11:31)

﴿قُل لَّآ أَمْلِكُ لِنَفْسِى نَفْعًا وَلَا ضَرًّا إِلَّا مَا شَآءَ ٱللَّهُ ۚ وَلَوْ كُنتُ أَعْلَمُ ٱلْغَيْبَ لَٱسْتَكْثَرْتُ مِنَ ٱلْخَيْرِ وَمَا مَسَّنِىَ ٱلسُّوٓءُ ۚ﴾

"(ಪ್ರವಾದಿಯವರೇ) ಹೇಳಿರಿ. ನನ್ನ ಸ್ವಂತ ಹಿತಾಹಿತಗಳ ಅಧಿಕಾರ ನನಗಿಲ್ಲ. ಅಲ್ಲಾಹನು ಯಾವುದನ್ನು ಇಚ್ಛಿಸುತ್ತಾನೋ ಅದು ಆಗುತ್ತದೆ. ಮತ್ತು ನನಗೆ ಪರೋಕ್ಷದ ಜ್ಞಾನವಿರುತ್ತಿದ್ದರೆ ನಾನು ಅನೇಕ ಲಾಭಗಳನ್ನು ನನಗಾಗಿ ಒದಗಿಸಿಕೊಳ್ಳುತ್ತಿದ್ದೆ. ಮತ್ತು ನನಗೆಂದೂ ಹಾನಿ ತಟ್ಟುತ್ತಿರಲಿಲ್ಲ." (7:188)

## ಶಿಯಾಗಳು ಮತ್ತು ತೌಹೀದುಲ್ ಉಲೂಹಿಯ್ಯತ್:

ಆರಾಧನೆಯಲ್ಲಿ ಅಲ್ಲಾಹನನ್ನು ಏಕನಾಗಿಸುವುದು ತೌಹೀದುಲ್ ಉಲೂಹಿಯ್ಯತ್ ಅಥವಾ ಆರಾಧನೆಯಲ್ಲಿರುವ ಏಕತ್ವವಾಗಿದೆ. ದುಆ (ಪ್ರಾರ್ಥನೆ), ಬಲಿ, ಹರಕೆ, ನಮಾಝ್, ರಜಾಅ್ (ನಿರೀಕ್ಷೆ), ಖೌಫ್ (ಭಯ), ಸಹಾಯಯಾಚನೆ, ತವಕ್ಕುಲ್ (ಭರವಸೆ ಇಡುವುದು) ಮುಂತಾದ ಆರಾಧನೆಗಳಲ್ಲಿ ಅಲ್ಲಾಹನನ್ನು ಮಾತ್ರ ಏಕನಾಗಿಸಿ ಅವನಿಗಾಗಿ ನಿರ್ವಹಿಸಲ್ಪಡಬೇಕು. ಅವುಗಳಲ್ಲಿ ಅವನಿಗೆ ಯಾರನ್ನೂ ಭಾಗೀದಾರರನ್ನಾಗಿ ಸ್ವೀಕರಿಸಬಾರದು.

ಶಿಯಾಗಳು ಇಸ್ಲಾಮಿನ ಈ ಅಲಂಘನೀಯ ಆದರ್ಶವನ್ನು ಕಾಯ್ದುಕೊಂಡವರು ಅಥವಾ ಪಾಲಿಸಿದವರಲ್ಲ. ಅವರಲ್ಲಿ ತೌಹೀದಿನ ಬುಡಕ್ಕೆ ಕೊಡಲಿಯೇಟು ನೀಡುವ ಹಲವಾರು ರಚನೆಗಳು ಮತ್ತು ಕರ್ಮಗಳಿವೆ. ಕೆಲವು ಉದಾಹರಣೆಗಳನ್ನು ನೋಡಿರಿ.

1. ಇಮಾಮರುಗಳು ಸೃಷ್ಟಿಗಳು ಮತ್ತು ಸೃಷ್ಟಿಕರ್ತನ ನಡುವಿರುವ ಮಧ್ಯವರ್ತಿಗಳಾಗಿದ್ದಾರೆ ಎಂಬ ವಿಶ್ವಾಸ :

   ಶಿಯಾ ಶೈಖ್ ಮಜ್ಲಿಸಿ ತಮ್ಮ ಬಿಹಾರುಲ್ ಅನ್ವಾರ್ ಎಂಬ ಗ್ರಂಥದಲ್ಲಿ ಬರೆಯುತ್ತಾರೆ:

   "ಇಮಾಮರುಗಳು ಪ್ರಭುವಿಗಿರುವ ಮರೆಗಳಾಗಿದ್ದಾರೆ. ಅವರು ಪ್ರಭು ಮತ್ತು ಸೃಷ್ಟಿಗಳ ನಡುವೆ ಮಧ್ಯವರ್ತಿಗಳಾಗಿ ವರ್ತಿಸುತ್ತಾರೆ."

   ಇವರು ಈ ಗ್ರಂಥದ ಒಂದು ಅಧ್ಯಾಯಕ್ಕೆ ನೀಡಿದ ಹೆಸರು ಹೀಗಿದೆ: "ಜನರಿಗೆ ಇಮಾಮರಿಲ್ಲದೆ ಸನ್ಮಾರ್ಗದರ್ಶನವಿಲ್ಲ. ಇಮಾಮರು ಸೃಷ್ಟಿಗಳು ಮತ್ತು ಸೃಷ್ಟಿಕರ್ತನ ನಡುವಿನ ಮಧ್ಯವರ್ತಿಗಳಾಗಿದ್ದಾರೆ. ಇಮಾಮರನ್ನು ತಿಳಿದವರು ಮಾತ್ರ ಸ್ವರ್ಗ ಪ್ರವೇಶಿಸುತ್ತಾರೆ."

2. ಕಬ್ರ್‌ನ ನಿವಾಸಿಗಳೊಂದಿಗೆ ಇಸ್ತಿಗಾಸ :

   ಶಿಯಾಗಳು ಅಲ್ಲಾಹನೊಂದಿಗೆ ಮಾತ್ರ ಮಾಡಬೇಕಾದ ಸಹಾಯಯಾಚನೆಯನ್ನು ಇಮಾಮರುಗಳೊಂದಿಗೆ ಮಾಡುವವರಾಗಿದ್ದಾರೆ. ಬಿಹಾರುಲ್ ಅನ್ವಾರ್‌ನಲ್ಲಿ ರೋಗಶಮನವನ್ನು ಅರಸುವವರಿಗೆ ಇಮಾಮರುಗಳು ಅತ್ಯುತ್ತಮ ರೋಗಶಮನ ಮತ್ತು ಔಷಧಿಯಾಗಿದ್ದಾರೆಂದು ಬರೆಯಲಾಗಿದೆ.

   ಮಾತ್ರವಲ್ಲದೆ ವಿವಿಧ ಸಂಕಷ್ಟಗಳ ಸಮಯದಲ್ಲಿ ಕರೆದು ಪ್ರಾರ್ಥಿಸಬೇಕಾದ ಇಮಾಮರುಗಳ ಪಟ್ಟಿಯನ್ನೇ ಆ ಗ್ರಂಥದಲ್ಲಿ ವಿವರಿಸಲಾಗಿದೆ. ಬಿಹಾರುಲ್ ಅನ್ವಾರ್‌ನ ಒಂದು ವರದಿಯನ್ನು ನೋಡಿರಿ.

   "ಆಡಳಿತಗಾರರು ಮತ್ತು ಶೈತಾನನ ಉಪಟಳದಿಂದ ರಕ್ಷಣೆ ಹೊಂದಲು ಅಲಿಯ್ಯ್ ಬಿನ್ ಹುಸೈನ್ ರೊಂದಿಗೆ, ಪರಲೋಕ ಮತ್ತು ಅಲ್ಲಾಹನ ಭಯವುಂಟಾಗುವ ಸಹಾಯಕ್ಕಾಗಿ

*49 ನೇ ಪುಟಕ್ಕೆ*

13

ಆದರ್ಶ ನಾರಿಯರ

# ಸವಿಶೇಷತೆಗಳು

# ಲೈಲಾ ಬಿಂತಿ ಅಬೂ ಹಸಮ

ಮುಸಲ್ಮಾನರು ಅವರ ವಿಶ್ವಾಸ ಮತ್ತು ಧರ್ಮದ ಸಂರಕ್ಷಣೆಗಾಗಿ ಅಬೀಸೀನಿಯಾಕ್ಕೆ ವಲಸೆ ಹೋಗುವ ಕಾಲಘಟ್ಟದಲ್ಲಿ ಉಮರ್ ಬಿನ್ ಖತ್ತಾಬ್(ﷺ) ಇನ್ನೂ ಇಸ್ಲಾಮ್ ಸ್ವೀಕರಿಸಿರಲಿಲ್ಲ. ಅವರು ಮುಸಲ್ಮಾನರನ್ನು ಮನಬಂದಂತೆ ಹಿಂಸಿಸುತ್ತಿದ್ದರು. ತೀವ್ರ ದಬ್ಬಾಳಿಕೆಯನ್ನು ನಡೆಸುತ್ತಿದ್ದರು. ಅವರ ಅಕ್ರಮ ಮತ್ತು ಅಮಾನವೀಯ ವರ್ತನೆಗಳಿಂದ ದಿಕ್ಕೆಟ್ಟುಕೊಂಡು ನಾವು ಅಬೀಸೀನಿಯಾಕ್ಕೆ ಹಿಜಿರಾ ಹೊರಟದ್ದಾಗಿತ್ತು. ಮುಸಲ್ಮಾನರ ತಂಡ ಅಬೀಸೀನಿಯಾಕ್ಕೆ ಹೊರಡಲು ಸನ್ನದ್ಧವಾಗಿತ್ತು.

ಮಕ್ಕಾ ಎಂಬ ಅಜ್ಞಾನದ ಅಂಧಕಾರ ತುಂಬಿದ ಬೆಂಗಾಡಿನಲ್ಲಿ ಇಸ್ಲಾಮಿನ ಹೊಂಬೆಳಕು ತಂಗಾಳಿಯಾಗಿ ಬೀಸತೊಡಗಿದಾಗ ಜನರಲ್ಲಿ ಎರಡು ರೀತಿಯ ಪರಿಣಾಮಗಳು ಗೋಚರಿಸತೊಡಗಿತು. ಕೆಲವರು ಈ ಸತ್ಯ ಸಂದೇಶವನ್ನು ಪರಕೀಯವಾಗಿ ಕಂಡರು. ಅವರ ಮನ-ಮಸ್ತಿಷ್ಕವು ಅದನ್ನು ಅಂಗೀಕರಿಸಲಿಲ್ಲ. ಅವರು ಅದನ್ನು ನಿರಾಕರಿಸಿದ್ದು ಮಾತ್ರವಲ್ಲ ವಿರೋಧಿಸಿದರು. ಅಲ್ಲಾಹನ ಸಂದೇಶವಾಹಕರು ಮತ್ತು ಅವರ ಅನುಯಾಯಿಗಳನ್ನು ಸಾದ್ಯಂತ ಪೀಡಿಸಿದರು. ದೌರ್ಜನ್ಯ ಮತ್ತು ದಬ್ಬಾಳಿಕೆಗಳನ್ನು ಎಸಗಿದರು. ಇನ್ನು ಕೆಲವರು ಈ ಸತ್ಯ ಸಂದೇಶವನ್ನು ಅತ್ಯಂತ ಗೌರವಪೂರ್ವಕವಾಗಿ ಸ್ವೀಕರಿಸಿದರು. ಶತಮಾನಗಳಿಂದ ಇದಕ್ಕಾಗಿ ಕಾಯುತ್ತಿದ್ದರೋ ಎನ್ನುವಂತೆ ಅತ್ತಕಡೆ ದೌಡಾಯಿಸಿದರು. ಈ ಸಂದೇಶವು ಅವರ ಕಿವಿಗೆ ಬಿದ್ದ ತಕ್ಷಣ ಅವರು ಯಾವುದೇ ತಕರಾರಿಲ್ಲದೆ ಶಿರಬಾಗಿ ಅದನ್ನು ಸ್ವೀಕರಿಸಿದರು. ಎಲ್ಲಾ ರೀತಿಯ ಅಪಪ್ರಚಾರ, ಕಿರುಕುಳ, ಬೆದರಿಕೆಗಳನ್ನು ಕಡೆಗಣಿಸಿ ಇಸ್ಲಾಮಿನ ಬಾಹುಬಂಧನದಲ್ಲಿ ಸೇರಿಕೊಂಡರು. ಸಾಬಿಕೂನಲ್ ಅವ್ವಲೀನ್‌ಗಳೆಂಬ ಪದವಿಗೆ ಅರ್ಹರಾದರು.

ಕೆಲವು ಗೋತ್ರಗಳ ಸ್ತ್ರೀಯರು ಇಸ್ಲಾಮ್ ಸ್ವೀಕರಿಸುವುದರಲ್ಲಿ ಪೈಪೋಟಿಗಿಳಿದರು. ಅವರ ಪುರುಷರು ಹಿಂದೆ ಉಳಿದು ಬಿಟ್ಟರು. ಪುರುಷರು ಇಸ್ಲಾಮ್ ಸ್ವೀಕರಿಸಿಕೊಂಡು ಸ್ತ್ರೀಯರು ಜಂಜಾಟದಲ್ಲಿ ಬಿದ್ದುಬಿಟ್ಟ ಉದಾಹರಣೆಗಳೂ ಇಲ್ಲದಿಲ್ಲ. ಕೆಲವು ಪ್ರತಿಷ್ಠಿತ ಕುಟುಂಬಗಳು ಇಸ್ಲಾಮಿನ ಕರೆ ಕಿವಿಗೆ ಬಿದ್ದ ತಕ್ಷಣ ಸ್ತ್ರೀ ಪುರುಷರೆಲ್ಲರೂ ಇಸ್ಲಾಮ್ ಸ್ವೀಕರಿಸಿದ ನಿದರ್ಶನಗಳೂ ಇದೆ. ಲೈಲಾ ಬಿಂತಿ ಅಬೀ ಹಸಮ(ﷺ) ಇಸ್ಲಾಮಿನ ಆರಂಭ ಕಾಲದಲ್ಲೇ ಅದರಲ್ಲಿ ಪ್ರವೇಶಿಸುವ ಸೌಭಾಗ್ಯವನ್ನು ಪಡೆದವರು. ಅಗ್ರಗಣ್ಯ ಮುಸಲ್ಮಾನರ ಪಂಕ್ತಿಯಲ್ಲಿ ಸ್ಥಾನ ಗಿಟ್ಟಿಸಿಕೊಂಡರು.

ಲೈಲಾ ಬಿಂತಿ ಅಬೀ ಹಸಮ(ﷺ) ಕುರೈಶಿ ಗೋತ್ರದ ಅದೀ ವಂಶದವರು. ಇವರ ಹೆಸರು ಲೈಲಾ ಮತ್ತು ಉಪನಾಮ ಉಮ್ಮು ಅಬ್ದುಲ್ಲ ಎಂದಾಗಿದೆ. ಅವರ ವಂಶ ಪರಂಪರೆ ಈ ರೀತಿ ಇದೆ.

ಲೈಲಾ ಬಿಂತಿ ಅಬೂ ಹಸಮ ಬಿನ್ ಹುಝೈಫ ಬಿನ್ ಗ್ವಾಸಿಮ್ ಬಿನ್ ಆಮಿರ್ ಬಿನ್ ಅಬ್ದುಲ್ಲ ಬಿನ್ ಉಬೈದ್ ಬಿನ್ ಔತಜ್ ಬಿನ್ ಅದೀ ಬಿನ್ ಕಅಬ್ ಬಿನ್ ಲುವಯ್ಯ್

ಇವರ ವಿವಾಹವು ಆಮಿರ್ ಬಿನ್ ರಬೀಅ ಅನ್‌ಬರೀಯವರೊಂದಿಗೆ ನಡೆಯಿತು. ಅವರು ಕೂಡಾ ಇಸ್ಲಾಮಿನ ಆರಂಭಕಾಲದಲ್ಲೇ ಇಸ್ಲಾಮ್ ಸ್ವೀಕರಿಸಿದ್ದರು. ಪತಿ-ಪತ್ನಿಯರಿಬ್ಬರಿಗೂ ಒಂದೇ ಸಮಯದಲ್ಲಿ ಪ್ರವಾದಿ(ﷺ) ಯವರ ಸಮಕ್ಷಮದಲ್ಲಿ ಇಸ್ಲಾಮ್‌ನಲ್ಲಿ ಪ್ರವೇಶಿಸಿದ್ದರು. ಇವರು ಮಕ್ಕಾದಿಂದ ಅಬಿಸೀನಿಯಾಕ್ಕೆ

ಪ್ರಪ್ರಥಮವಾಗಿ ಹಿಜ್ರಾ ಮಾಡಿದ ತಂಡದಲ್ಲಿದ್ದರು. ಅಲ್ಲಿ ಕೆಲವು ಕಾಲ ಇದ್ದು ಬಳಿಕ ಮಕ್ಕಾಕ್ಕೆ ಮರಳಿದ್ದರು. ನಂತರ ಮತ್ತೆ ತಮ್ಮ ವಿಶ್ವಾಸ ಮತ್ತು ಪ್ರಾಣ ರಕ್ಷಣೆಗಾಗಿ ಮದೀನಕ್ಕೆ ಹಿಜಿರಾ ಹೋದರು. ಆ ಪ್ರಕಾರ ಅವರು ಎರಡು ಹಿಜಿರಾ ಮಾಡಿದವರೆಂಬ ಹಿರಿಮೆ ಗಳಿಸಿದರು. ಇದರೊಂದಿಗೆ ಅವರು ಎರಡು ಕಿಬ್ಲಾ ಅನುಸರಿಸಿ ನಮಾಝ್ ನಿರ್ವಹಿಸಿದವರೆಂಬ ಮೇಲ್ಮೆಯನ್ನು ಕೂಡಾ ಪಡೆದಿದ್ದಾರೆ. (ಬೈತುಲ್ ಮುಕದ್ದಿಸ್ ಮತ್ತು ಮಸ್ಜಿದುಲ್ ಹರಾಮ್)

ಅಸದುಲ್ ಗಾಬ ಚರಿತ್ರೆಗೆ ಸಂಬಂಧಿಸಿದ ಒಂದು ಪ್ರಖ್ಯಾತ ಗ್ರಂಥವಾಗಿದೆ. ಅದರಲ್ಲಿ ಪ್ರವಾದಿ(ﷺ) ಯವರು ಮತ್ತು ಅವರ ಜೀವನಕ್ಕೆ ಸಂಬಂಧಿಸಿದ ಬಹಳ ಪ್ರಾಮುಖ್ಯವಾದ ಮಾಹಿತಿಗಳಿವೆ. ಆ ಗ್ರಂಥದಲ್ಲಿ ಲೈಲಾ ಬಿಂತಿ ಅಬೂ ಹಸಮ(ؓ) ರವರ ಅಬಿಸೀನಿಯಾ ಹಿಜಿರಕ್ಕೆ ಸಂಬಂಧಿಸಿದ ಉಲ್ಲೇಖಗಳನ್ನು ಕಾಣಬಹುದಾಗಿದೆ. ಅದರಲ್ಲಿ ಅವರ ಮಾತುಗಳೆಂದು ನಮೂದಿಸಲ್ಪಟ್ಟ ಘಟನೆ ಇದೆ. ಅವರು ಹೇಳುತ್ತಾರೆ:

ಮುಸಲ್ಮಾನರು ಅವರ ವಿಶ್ವಾಸ ಮತ್ತು ಧರ್ಮದ ಸಂರಕ್ಷಣೆಗಾಗಿ ಅಬೀಸೀನಿಯಾಕ್ಕೆ ವಲಸೆ ಹೋಗುವ ಕಾಲಘಟ್ಟದಲ್ಲಿ ಉಮರ್ ಬಿನ್ ಖತ್ತಾಬ್(ؓ) ಇನ್ನೂ ಇಸ್ಲಾಮ್ ಸ್ವೀಕರಿಸಿರಲಿಲ್ಲ. ಅವರು ಮುಸಲ್ಮಾನರನ್ನು ಮನಬಂದಂತೆ ಹಿಂಸಿಸುತ್ತಿದ್ದರು. ತೀವ್ರ ದಬ್ಬಾಳಿಕೆಯನ್ನು ನಡೆಸುತ್ತಿದ್ದರು. ಅವರ ಅಕ್ರಮ ಮತ್ತು ಅಮಾನವೀಯ ವರ್ತನೆಗಳಿಂದ ದಿಕ್ಕೆಟ್ಟುಕೊಂಡು ನಾವು ಅಬೀಸೀನಿಯಾಕ್ಕೆ ಹಿಜಿರಾ ಹೊರಟದ್ದಾಗಿತ್ತು. ಮುಸಲ್ಮಾನರ ತಂಡ ಅಬೀಸೀನಿಯಾಕ್ಕೆ ಹೊರಡಲು ಸನ್ನದ್ಧವಾಗಿತ್ತು. ನಾನು ಒಂಟೆಯ ಬೆನ್ನೇರಿಕೊಂಡು ಹೊರಡಬೇಕೆನ್ನುವಷ್ಟರಲ್ಲಿ ಉಮರ್(ؓ) ಧಾವಿಸಿ ಬಂದರು. ನಮ್ಮನ್ನು ಕಂಡು ನಿಂತುಕೊಂಡು ಕೇಳಿದರು.

“ಉಮ್ಮು ಅಬ್ದುಲ್ಲ! ಎಲ್ಲಿಗೆ ಹೊರಟಿದ್ದೀರಿ?”

ನಾನು ಹೇಳಿದೆ: “ಉಮರ್! ನಾವು ಇಸ್ಲಾಮ್ ಸ್ವೀಕರಿಸಿದ ಕಾರಣಕ್ಕೆ ನೀವು ನಮ್ಮನ್ನು ಎಷ್ಟು ಸತಾಯಿಸಲು ಸಾಧ್ಯವೋ ಅಷ್ಟು ಸತಾಯಿಸಿದ್ದೀರಿ. ನಮ್ಮನ್ನು ಎಷ್ಟು ಸಂಕಷ್ಟಕ್ಕೆ ಸಿಲುಕಿಸಲು ಸಾಧ್ಯವೋ ಸಿಲುಕಿಸಿದ್ದೀರಿ. ನಿಮಗೆ ಎಂದೂ ನಮ್ಮ ಮೇಲೆ ಕರುಣೆ ಉಂಟಾಗಲೇ ಇಲ್ಲ. ನೀವು ತೋಚಿದಂತೆ ನಮ್ಮನ್ನು ಶಿಕ್ಷಿಸುತ್ತಾ ಇದ್ದಿರಿ. ನಾವು ಮೌನವಾಗಿ ಅದನ್ನು ಅನುಭವಿಸುತ್ತಾ ಬಂದೆವು. ನಮ್ಮ ಸಂರಕ್ಷಕ ಕೇವಲ ಅಲ್ಲಾಹನೇ ಆಗಿದ್ದಾನೆ. ಅಲ್ಲಾಹನ ಭೂಮಿ ವಿಶಾಲವಾಗಿದೆ. ಎಲ್ಲಿ ಸ್ಥಳ ಸಿಗುವುದೋ ಅಲ್ಲಿಗೆ ಹೊರಟು ಹೋಗುತ್ತೇವೆ.”

ಉಮರ್(ؓ) ನನ್ನ ಮಾತು ಕೇಳಿ ಮೌನವಾದರು. ತಲೆ ತಗ್ಗಿಸಿಕೊಂಡು ಅಲ್ಲಿಂದ ಹೊರಟುಹೋದರು.

ಲೈಲಾ(ؓ) ಹೇಳುತ್ತಾರೆ: ನನ್ನ ಪತಿ ಆಮಿರ್ ಬಂದಾಗ ಈ ಎಲ್ಲಾ ವಿಷಯವನ್ನು ಅವರಿಗೆ ತಿಳಿಸಿದೆ. ಉಮರ್(ؓ) ರವರ ಪ್ರತಿಕ್ರಿಯೆಯ ಬಗ್ಗೆಯೂ ಹೇಳಿದೆ. ಅದನ್ನು ಆಲಿಸಿದ ಆಮಿರ್ (ؓ) ಹೇಳಿದರು. “ಉಮರ್(ؓ) ಇಸ್ಲಾಮ್ ಸ್ವೀಕರಿಸುವರೆಂದು ನೀವು ಭಾವಿಸುವೆಯಾ?” ನಾನು ಹೇಳಿದೆ. “ಹೌದು ಇದು ನನ್ನ ಅಭಿಲಾಷೆಯಾಗಿದೆ.”

ಕೊನೆಗೆ ಅಲ್ಲಾಹು ಅವನ ಕೃಪೆಯಿಂದ ಹಾಗೇ ಮಾಡಿದ. ನನ್ನ ಅಭಿಲಾಷೆಯನ್ನು ಪೂರ್ತೀಕರಿಸಿದ.

ಹಝ್ರತ್ ಲೈಲಾ ಬಿಂತಿ ಅಬೂ ಹಸಮ(ؓ) ಅತ್ಯಂತ ಭಯ-ಭಕ್ತಿ ಪಾಲಿಸುವ ಸ್ತ್ರೀ ಆಗಿದ್ದರು. ಅವರು ಹೇಳುವಂತೆ, ಒಮ್ಮೆ ನಾನು ಪ್ರವಾದಿ(ﷺ) ಯವರ ಸನ್ನಿಧಿಯಲ್ಲಿ ಹಾಜರಿದ್ದಾಗ ಅಲ್ಲಿಗೆ ನನ್ನ ಪುತ್ರನೂ ಬಂದ. ನಾನು ಅವನನ್ನು ಉದ್ದೇಶಿಸಿಕೊಂಡು (ಕೈ ಮುಷ್ಠಿ ಮಾಡಿಕೊಂಡು) ಹೇಳಿದೆ. “ಇಲ್ಲಿ ಬಾ... ಇದನ್ನು ತಗೋ!”

ಅದನ್ನು ಕಂಡು ಪ್ರವಾದಿ(ﷺ) ಯವರು ಹೇಳಿದರು. “ನೀವು ನಿಜವಾಗಿಯೂ ಅವನಿಗೆ ಏನಾದರೂ ಕೊಡಲು ಇಚ್ಛಿಸುತ್ತೀರಾ?” ನಾನು ಮುಷ್ಠಿ ತೆರೆದು ತೋರಿಸುತ್ತಾ ‘ಖರ್ಜೂರ’ ಎಂದೆ. ಪ್ರವಾದಿ (ﷺ) ಯವರು ಹೇಳಿದರು. “ನೀವೇನಾದರೂ ಅವನಿಗೆ ಏನೂ ಕೊಡದೇ ಇರುತ್ತಿದ್ದರೆ ನಾನು ನಿಮ್ಮನ್ನು ಸುಳ್ಳಿ ಎಂದು ಭಾವಿಸುತ್ತಿದ್ದೆ.”

ಈ ಘಟನೆಯಲ್ಲಿ ಎಲ್ಲ ಮಹಿಳೆಯರಿಗೂ ಒಂದು ಪ್ರಮುಖ ಪಾಠವಿದೆ. ಯಾವ ಸಂದರ್ಭದಲ್ಲೂ ಯಾವ ಕಾರಣಕ್ಕೂ ತಾಯಂದಿರು ಅವರ ಮಕ್ಕಳೊಂದಿಗೆ ಸುಳ್ಳು ಹೇಳಬಾರದು. ಅದು ಕೊಡಿಸುತ್ತೇನೆ, ಇದು ಕೊಡಿಸುತ್ತೇನೆ ಎಂದು ಸುಳ್ಳು ಭರವಸೆ ನೀಡಬಾರದು. ಸುಳ್ಳು ಅತ್ಯಂತ ದೊಡ್ಡ ಪಾಪವಾಗಿದೆ. ಅಪರಾಧಗಳ ತಾಯಿ ಎಂದು ಅದು ಬಣ್ಣಿಸಲ್ಪಡುತ್ತದೆ.

ಲೈಲಾ ಬಿಂತಿ ಅಬೂ ಹಸಮ(ؓ) ರವರು ಯಾವಾಗ ನಿಧನರಾದರೆಂದೂ ಅವರ ಮಕ್ಕಳು ಏನಾದರೆಂದೂ ನಿಖರವಾಗಿ ಚರಿತ್ರೆ ಗ್ರಂಥಗಳಲ್ಲಿ ಕಂಡುಬರುವುದಿಲ್ಲ. ■

# ಬಿದ್‌ಅತ್ ಆದ ಕಾರ್ಯಗಳಲ್ಲಿ ಬೆವರು ಹರಿಸುವುದು

ಖ್ಯಾತ ಸಹಾಬಿ ಅಬ್ದುಲ್ಲ ಬಿನ್ ಮಸ್‌ಊದ್(﵁) ಹೇಳುತ್ತಾರೆ:

الِاقْتِصَادُ فِي السُّنَّةِ خَيْرٌ مِنَ الِاجْتِهَادِ فِي الْبِدْعَةِ.

"ಮಿತವಾಗಿ ಮತ್ತು ಸುಮಧ್ಯ ರೀತಿಯಲ್ಲಿ ಸುನ್ನತ್ ಅನುಸರಿಸಿ ಕಾರ್ಯ ನಿರ್ವಹಿಸುವುದು ಬಿದ್‌ಅತ್‌ನ ಕಾರ್ಯದಲ್ಲಿ ಬೆವರು ಹರಿಸಿ ಪರಿಶ್ರಮಿಸುವುದಕ್ಕಿಂತ ಉತ್ತಮವಾಗಿದೆ."

ಸತ್ಯವಿಶ್ವಾಸಿಗಳ ಸರದಾರ ಅಬ್ದುಲ್ಲ ಇಬ್ನ್ ಮಸ್‌ಊದ್(﵁) ರವರು ಸಹಾಬಿಗಳಲ್ಲಿ ಅಗ್ರೇಸರರ ಸಾಲಿನಲ್ಲಿ ಪರಿಗಣಿಸಲ್ಪಡುತ್ತಾರೆ. ಇಸ್ಲಾಮಿನ ಆರಂಭಕಾಲದಲ್ಲೇ ಇಸ್ಲಾಮನ್ನು ಆಲಿಂಗಿಸಿಕೊಳ್ಳುವ ಸೌಭಾಗ್ಯವಂತರಲ್ಲಿ ಇವರೂ ಒಬ್ಬರು. ಇಸ್ಲಾಮ್ ಸ್ವೀಕರಿಸಿದವರಲ್ಲಿ ಇಬ್ನ್ ಮಸ್‌ಊದ್(﵁) ಆರನೆಯವರು. ಅವರು ತಮ್ಮ ಧರ್ಮ ಮತ್ತು ವಿಶ್ವಾಸವನ್ನು ಸಂರಕ್ಷಿಸಿಕೊಳ್ಳುವ ಸಲುವಾಗಿ ಅಬೀಸೀನಿಯಾ ಮತ್ತು ಮದೀನಾ ಎರಡೂ ಕಡೆಗೂ ಹಿಜಿರಾ ಮಾಡಿದವರು. ಇಸ್ಲಾಮಿನ ಅಳಿವು-ಉಳಿವಿಗಾಗಿ ನಡೆದ ಪ್ರಪ್ರಥಮ ಯುದ್ಧ ಬದ್ರ್‌ನಲ್ಲಿ ಇವರು ಕೇವಲ ಪಾಲ್ಗೊಂಡಿದ್ದು ಮಾತ್ರವಲ್ಲ, ಇಸ್ಲಾಮಿನ ಶತ್ರು, ಪ್ರವಾದಿ(ﷺ) ಯವರ ಸಮುದಾಯದ ಫಿರ್‌ಔನ್ ಎಂದು ಬಣ್ಣಿಸಲ್ಪಟ್ಟ ಅಬೂಜಹಲನ ದೇಹದಿಂದ ಶಿರವನ್ನು ಬೇರ್ಪಡಿಸಿದವರೂ ಇವರೇ ಆಗಿದ್ದಾರೆ. ಪ್ರವಾದಿ(ﷺ) ಯವರು ಅಬೂಜಹಲನ ಖಡ್ಗವನ್ನು ಕೂಡಾ ಇವರಿಗೇ ನೀಡಿದ್ದರು.

ಇಸ್ಲಾಮಿನ ಎರಡನೇ ಖಲೀಫ ಉಮರ್(﵁) ರವರ ಆಡಳಿತಾವಧಿಯಲ್ಲಿ ಇವರಿಗೆ ಕೂಫಾದ ಖಾಝಿ ಮತ್ತು ಬೈತುಲ್ ಮಾಲ್ (ಸಾರ್ವಜನಿಕ ಸೊತ್ತು)ನ ಕಾರ್ಯದರ್ಶಿಯ ಹೊಣೆಗಾರಿಕೆಯನ್ನು ವಹಿಸಿಕೊಡಲಾಗಿತ್ತು. ಉಮರ್(﵁) ರವರ ಆಡಳಿತಾವಧಿಯ ಕೊನೆಯಲ್ಲೇ ಅವರು ಮದೀನಕ್ಕೆ ಮರಳಿ ಬಂದರು. ಉಸ್ಮಾನ್(﵁) ರವರ ಆಡಳಿತದ ಅವಧಿಯಲ್ಲಿ ಅಂದರೆ ಹಿಜಿರಾ 32ರಲ್ಲಿ ಅವರು ಮದೀನದಲ್ಲಿ ಮರಣ ಹೊಂದಿದರು.

ಈಮಾನ್ ಮತ್ತು ಕುಫ್ರ್, ತೌಹೀದ್ ಮತ್ತು ಶಿರ್ಕ್, ಸುನ್ನತ್ ಮತ್ತು ಬಿದ್‌ಅತ್ ಎನ್ನುವುದು ಇಸ್ಲಾಮಿಗೆ ಸಂಬಂಧಿಸಿದಂತೆ ಅತ್ಯಂತ ಗಣನೀಯ ಪದಗಳಾಗಿದ್ದು ಇವುಗಳ ನಡುವಿನ ವ್ಯತ್ಯಾಸವನ್ನು ಪ್ರತಿಯೊಬ್ಬ ಮುಸಲ್ಮಾನನೂ ಮನನ ಮಾಡಿಕೊಳ್ಳುವುದು ಅತ್ಯಾವಶ್ಯಕವಾಗಿದೆ. ಕುಫ್ರ್ ಏನೆಂಬುದನ್ನು ಅರ್ಥ ಮಾಡಿಕೊಂಡಾಗಲೇ ನಮಗೆ ಈಮಾನ್ ಎಂಬುವುದರ ಪ್ರಾಧಾನ್ಯತೆ ಮನವರಿಕೆಯಾಗುವುದು. ತೌಹೀದಿನ ಸುಗಂಧದ ಅರಿವಾಗಬೇಕೆಂದರೆ ನಮಗೆ ಶಿರ್ಕ್ ಎಂಬ ದುರ್ಗಂಧವು ನಮ್ಮ ಮೂಗಿಗೆ ಬಡಿದಿರಬೇಕು. ಅದೇ ಪ್ರಕಾರ ಬಿದ್‌ಅತ್ ಎಂಬ ಕಾರ್ಗತ್ತಲೆಯನ್ನು ಕಂಡಿರುವಾಗ ಮಾತ್ರ ಸುನ್ನತ್ ಎಂಬ ಹೊಂಬೆಳಕು ನಮ್ಮ ಅನುಭವಕ್ಕೆ ಬರುತ್ತದೆ.

ಪವಿತ್ರ ಕುರ್‌ಆನಿನಲ್ಲಿ ಪ್ರತಿಯೊಂದು ಕಡೆ ಈಮಾನ್, ತೌಹೀದ್ ಮತ್ತು ಸುನ್ನತ್ತನ್ನು ಹೇಗೆ ಸಮರ್ಥಿಸಲಾಗಿದೆಯೋ ಅದೇ ಪ್ರಕಾರ ಕುಫ್ರ್, ಶಿರ್ಕ್ ಮತ್ತು ಬಿದ್‌ಅತ್ತನ್ನು ಖಂಡಿಸಲಾಗಿದೆ. ಮಾತ್ರವಲ್ಲದೆ, ಅವುಗಳಿಂದ ಸಂಪೂರ್ಣ ದೂರವಿರುವಂತೆ ತಾಕೀತು ಮಾಡಲಾಗಿದೆ.

ಸಹಾಬಿ ಶ್ರೇಷ್ಠರಾದ ಅಬ್ದುಲ್ಲ ಬಿನ್ ಮಸ್‌ಊದ್(﵁) ರವರ ಈ ಮೇಲಿನ ಮಾತುಗಳಿಂದ ಒಂದು ವಿಷಯವು ಹುಣ್ಣಿಮೆಯ ಚಂದಿರನಂತೆ ಸುವ್ಯಕ್ತವಿರುವುದೇನೆಂದರೆ ಬಿದ್‌ಅತ್ ಆದ ಕಾರ್ಯವು ಎಷ್ಟೇ ಜನಾಕರ್ಷಕವಾಗಿದ್ದರೂ ಜನಪ್ರಿಯವೂ ಪ್ರಖ್ಯಾತವೂ ಆಗಿದ್ದರೂ ಅದರ ಫಲಿತಾಂಶ, ಅದರಿಂದ ಲಭಿಸುವ

ಲಾಭವು ಶೂನ್ಯವೂ ಪರಿತಾಪಕರವೂ ಆಗಿರುತ್ತದೆ. ಇಂತಹ ಕಾರ್ಯಗಳಿಂದ ಪುಣ್ಯ ಲಭಿಸುವುದಿರಲಿ, ತದ್ವಿರುದ್ಧವಾಗಿ ಪಾಪವೇ ಲಭಿಸುವುದು. ಇನ್ನು ಅವಿವೇಕಿಗಳಲ್ಲದೆ ಯಾರೂ ಬಿದ್‌ಅತ್‌ನ ಕಾರ್ಯದಲ್ಲಿ ಬೆವರು ಹರಿಸಿ ದುಡಿದು ಶಿಕ್ಷೆಗೆ ಗುರಿಯಾಗುವ ಕಾರ್ಯವನ್ನು ಮಾಡಲಾರರು.

ಬಿದ್‌ಅತ್ ಎಂದರೆ ಪುಣ್ಯ ಲಭಿಸುವ ಕಾರ್ಯವೆಂದು ತಿಳಿದು ಅಲ್ಲಾಹನನ್ನು ಸಂತೃಪ್ತಿ ಪಡಿಸುವ ಉದ್ದೇಶದಿಂದ ನಿರ್ವಹಿಸುವ ಕಾರ್ಯಗಳಾಗಿವೆ. ಕಿತಾಬ್ ಮತ್ತು ಸುನ್ನತ್‌ನಲ್ಲಿ ಅದಕ್ಕೆ ಯಾವುದೇ ಪುರಾವೆಯಿರುವುದಿಲ್ಲ. ಸಹಾಬಿಗಳಿಂದಲೋ ತಾಬಿಉಗಳಿಂದಲೋ ಅದಕ್ಕೆ ದೃಢೀಕರಣ ಲಭಿಸುವುದಿಲ್ಲ. ಈ ಕುರಿತಾಗಿ ಕೆಲವರು ಅವರ ಹಿಂಬಾಲಕರಿಗೆ ಧಾರ್ಮಿಕತೆಯನ್ನು ಬಲಪಡಿಸಲು, ಭಯಭಕ್ತಿ ವರ್ಧಿಸಲು, ಧಾರ್ಮಿಕ ದೃಷ್ಟಾಂತಗಳ ಕುರಿತು ಗೌರವಾದರ ಉಂಟುಮಾಡುವ ಕಾರ್ಯವೆಂದೂ ಇದು ಬಿದ್‌ಅತ್‌ನಲ್ಲಿ ಒಳಪಡುವುದಿಲ್ಲವೆಂದು ಹೇಳುತ್ತಾರೆ. ಇದು ಸಮಯ-ಸಂದರ್ಭಕ್ಕೆ ತಕ್ಕಂತೆ ಉಡುಪಿನ ವಿನ್ಯಾಸ ಬದಲಿಸುವಂತಹ, ವಾಹನಗಳಲ್ಲಿ ಸವಾರಿ ಮಾಡುವಂತಹ, ವಾಹನ ಬದಲಿಸುವಂತಹ, ಧಾರ್ಮಿಕ ಪುಸ್ತಕಗಳನ್ನು ಪ್ರಕಾಶನಗೊಳಿಸುವಂತಹ ಉತ್ತಮಕಾರ್ಯವೆಂದು ಹೇಳುತ್ತಾರೆ.

ಇದು ಅತ್ಯಂತ ದೊಡ್ಡ ಮೋಸ ಮತ್ತು ವಂಚನೆಯಾಗಿದೆ. ದೀನ್ ಮತ್ತು ಶರೀಅತ್ತನ್ನು ವಿರೂಪಗೊಳಿಸವಂತಹ ಕಾರ್ಯವಾಗಿದೆ. ವಾಸ್ತವದಲ್ಲಿ ಒಂಟೆಯ ಮೇಲೆ ಸವಾರಿ (ಪ್ರಯಾಣ) ಮಾಡಿದರೆ ಹೆಚ್ಚು ಪ್ರತಿಫಲ ಲಭಿಸುವುದೋ ಅಥವಾ ವಿಮಾನದಲ್ಲಿ ಪ್ರಯಾಣ ಮಾಡಿದರೆ ಹೆಚ್ಚು ಪ್ರತಿಫಲ ಲಭಿಸುವುದೋ? ಸವಾರಿಯ ವಿಷಯದಲ್ಲಿ ಪಾಪ ಪುಣ್ಯಗಳ ಪರಿಗಣನೆ ಇದೆಯೆಂದು ಯಾರೂ ಭಾವಿಸುವುದಿಲ್ಲ. ಹಾಗಿರುವಾಗ ಇದನ್ನು ಉದಾಹರಣೆಯಾಗಿ ಉಲ್ಲೇಖಿಸುವುದರ ಔಚಿತ್ಯವೇನು?

ಅದೇ ಪ್ರಕಾರ ಧರ್ಮದ ಲೇಬಲ್ ಹಚ್ಚಿ ಹಲವಾರು ಬಿದ್‌ಅತ್‌ಗಳು ಇಂದು ಸಮುದಾಯದಲ್ಲಿ ಆಚರಣೆಗೆ ತರಲಾಗಿದೆ. ಈ ಪೈಕಿ ಒಂದು ದೊಡ್ಡ ಬಿದ್‌ಅತ್ ಮೀಲಾದುನ್ನಬಿ ಆಗಿದೆ. ಪ್ರವಾದಿಪ್ರೇಮವೆಂಬ ಹೆಸರಲ್ಲಿ ಇದನ್ನು ಬಹಳ ವಿಜ್ರಂಭನೆಯಿಂದ ಆಚರಿಸಲಾಗುತ್ತದೆ. ಪ್ರವಾದಿ(ﷺ) ರವರ ಹೆಜ್ಜೆಯನ್ನು ಹಿಂಬಾಲಿಸುತ್ತಾ ತಮ್ಮ ಸರ್ವಸ್ವವನ್ನು ದೀನಿಗಾಗಿ ಸಮರ್ಪಿಸಿದ ಸಹಾಬಿಗಳಿಗೆ, ತಾಬಿಈಗಳಿಗೆ, ತಬಉತ್ತಾಬಿಈನರಿಗೆ ಪ್ರವಾದಿ(ﷺ)ಯವರ ಮೇಲೆ ಪ್ರೀತಿ ಇಲ್ಲವೆಂದು ಅರ್ಥವೇ? ರಬೀಉಲ್ ಅವ್ವಲ್ 12 ಅವರ ಜೀವನದಲ್ಲಿ ಬಂದಿರಲೇ ಇಲ್ಲವೇ? ಇಂತಹ ಸಡಗರ ಸಂಭ್ರಮದ ಆಚರಣೆಯನ್ನು ಮಾಡುವ ಸಾಮರ್ಥ್ಯ ಅವರಲ್ಲಿ ಇರಲಿಲ್ಲವೇ? ಮೆರವಣಿಗೆ ನಡೆಸಲು ಅಂದು ಅವರಿಗೆ ಆಡಳಿತದಿಂದ ಯಾವುದಾದರೂ ಅಡಚಣೆಗಳಿತ್ತೇ?

ಈ ಎಲ್ಲಾ ಪ್ರಶ್ನೆಗಳಿಗೆ ಉತ್ತರ ಪ್ರವಾದಿ(ﷺ) ಯವರಿಂದ ಶ್ರೇಷ್ಠ ತಲೆಮಾರು ಎಂದು ಘೋಷಿಸಲ್ಪಟ್ಟ ಆ ತಲೆಮಾರಿನಲ್ಲಿ ಇದೆಲ್ಲಾ ಒಂದು ಧಾರ್ಮಿಕ ಕಾರ್ಯವಾಗಿ ಪರಿಗಣಿಸಲ್ಪಟ್ಟೇ ಇರಲಿಲ್ಲ. ಹಾಗಾದರೆ ಅಂದಿನ ಪೂರ್ವಿಕ ಸಜ್ಜನರಿಗೆ ಪುಣ್ಯಕರ್ಮವಲ್ಲದ ಒಂದು ಕಾರ್ಯ ಇಂದು ಪುಣ್ಯ ಮತ್ತು ಪ್ರತಿಫಲ ಯೋಗ್ಯವಾದ ಕಾರ್ಯವೆನಿಸುವುದು ಹೇಗೆ? ಒಂದೊಮ್ಮೆ ಅದು ದಾರ್ಮಿಕವೂ ಪುಣ್ಯದಾಯಕವೂ ಆದ ಕಾರ್ಯವೆಂದಾದರೆ ಬಿದ್‌ಅತ್ ಎಂದು ಕರೆಯುವುದು ಯಾವುದನ್ನು?

ಬಿದ್‌ಅತ್ ಎನ್ನುವುದು ಕೆಡುಕು ಅಥವಾ ನೀಚರೂಪದಲ್ಲಿ ನಮ್ಮ ಮುಂದೆ ಬರುವುದಿಲ್ಲ. ಬದಲಾಗಿ ಧಾರ್ಮಿಕವಾದ ವೇಷವನ್ನು ಧರಿಸಿಕೊಂಡು ಅತ್ಯಾಕರ್ಷಕ ರೂಪದಲ್ಲೇ ಜನರ ಮುಂದೆ ಬರುತ್ತದೆ. ಅದರ ಬಾಹ್ಯ ಅಕರ್ಷಣೆಯಿಂದಲೇ ಜನ ಅದರ ಮೋಸದ ಜಾಲದಲ್ಲಿ ಬಿದ್ದುಬಿಡುತ್ತಾರೆ. ಅದೊಂದು ಪುಣ್ಯಕಾರ್ಯವೆಂಬ ಭಾವನೆ ಜನರಲ್ಲಿ ಅದು ಸೃಷ್ಟಿಸುತ್ತದೆ. ಪತ್ನಿ ಮಕ್ಕಳನ್ನು ಕಡೆಗಣಿಸಿ ಸುದೀರ್ಘ ರಾತ್ರಿ ತನಕ ಝಿಕ್ರ್-ಸ್ವಲಾತ್, ಮತಪ್ರಸಂಗ ಮುಂತಾದ ಕಾರ್ಯಗಳಲ್ಲಿ ನಿಬಿಡರಾಗುವುದು, ನಿರಂತರ ನಫಿಲ್ ಉಪವಾಸಗಳನ್ನು ಅನುಷ್ಠಿಸುವುದು, ಸಾವಿರ ರಕ್‌ಅತ್ ನಫಿಲ್ ನಮಾಝ್ ನಿರ್ವಹಿಸುವುದು, ವ್ಯರ್ಥ ಮತ್ತು ನಿರರ್ಥಕ ಕಾರ್ಯಗಳನ್ನು ಧಾರ್ಮಿಕ ಸೇವೆ ಅಥವಾ ಪುಣ್ಯ ಕಾರ್ಯವೆಂದುಕೊಂಡು ನಿರ್ವಹಿಸುವುದು, ಇಂತಹ ನಿರರ್ಥಕ ಕಾರ್ಯಗಳಿಗಾಗಿ ಸಮಯ ಸಂಪತ್ತನ್ನು ವ್ಯಯಿಸುವುದು, ಜನರೆಡೆಯಲ್ಲಿ ಇಂತಹ ಕಾರ್ಯಗಳನ್ನು ಪ್ರಚರಿಸುವುದು ಮುಂತಾದವುಗಳೆಲ್ಲವೂ ಬಿದ್‌ಅತ್‌ನ ವ್ಯಾಪ್ತಿಯಲ್ಲಿ ಬರುತ್ತದೆ.

ಕೇವಲ ಈದ್ ಮೀಲಾದುನ್ನಬಿಗೆ ಸಂಬಂಧಿಸಿದಂತೆ ಎಷ್ಟೋ ಜನರು ಅವರ ಸಮಯ, ಸಂಪತ್ತು ಮತ್ತು ಪರಿಶ್ರಮಗಳನ್ನು ವ್ಯರ್ಥಪಡಿಸಿಕೊಳ್ಳುತ್ತಿರುವುದನ್ನು ನಾವು ಕಾಣಬಹುದಾಗಿದೆ. ಮಾತ್ರವಲ್ಲ, ಸಾಮಾಜಿಕ ಸಾಮರಸ್ಯತೆಗೆ, ಶಾಂತಿ ಸುವ್ಯವಸ್ಥೆಗೆ ಇದರಿಂದ ವಿಘ್ನ ಉಂಟಾಗುವುದನ್ನೂ ನಾವು ಕಾಣುತ್ತಿದ್ದೇವೆ. ಇಂದು ಅದೆಷ್ಟೋ ಮುಸಲ್ಮಾನರು ಇಸ್ಲಾಮಿಗೆ ಸಂಬಂಧವೇ ಇಲ್ಲದಂತಹ ಇಂತಹ ಆಚರಣೆಗಳನ್ನು ದೊಡ್ಡ ಪುಣ್ಯಕರ್ಮವೋ ಎಂಬಂತೆ ಆಚರಿಸುತ್ತಿದ್ದಾರೆ. ಅದೇ ಪ್ರಕಾರ ಅಮುಸ್ಲಿಮರು ಇದೇ ಇಸ್ಲಾಮ್ ಎಂದು ತಪ್ಪುಗ್ರಹಿಸಿಕೊಂಡು ಅವರು ಆಚರಿಸುವ ಧರ್ಮಕ್ಕೂ ಇಸ್ಲಾಮಿಗೂ ಯಾವುದೇ ವ್ಯತ್ಯಾಸವಿಲ್ಲವೆಂಬ ಧಾರಣೆಯನ್ನು ಹೊಂದುತ್ತಿದ್ದಾರೆ.

*44 ನೇ ಪುಟಕ್ಕೆ*




# ಅವರನ್ನು ಮೊದಲು ಹೊಂಡದಿಂದ ಮೇಲಕ್ಕೆತ್ತಿ

ಡಾ. ಮುಹಮ್ಮದ್ ಅಬ್ದುರ್ರಹ್ಮಾನ್ ಅರೀಫಿ

ನಿಮಗೆ ನಿಮ್ಮ ಜೀವನದಲ್ಲಿ ಎಂದಾದರೂ ತುಂಬಿದ ಸಭೆಯಲ್ಲಿ ಯಾರಿಂದಾದರೂ ಅಪಮಾನಕರವಾದ ಮಾತುಗಳನ್ನು ಕೇಳುವಂತಹಾ ಸನ್ನಿವೇಶ ಎದುರಾಗಿದೆಯೇ? ಅಥವಾ ನಿಮ್ಮ ಉಡುಪು ಅಥವಾ ನಿಮ್ಮ ಯಾವುದಾದರೂ ಒಂದು ಮಾತನ್ನು ಉಲ್ಲೇಖಿಸಿ ಯಾರಾದರೂ ಬಹಿರಂಗವಾಗಿ ತಮಾಷೆ ಮಾಡಿ ಅವಮಾನಿಸಿದಾಗ ನಿಮ್ಮ ಮುಖದಲ್ಲಿ ಸಿಟ್ಟು, ಅಸಮಾಧಾನದ ಚಿಹ್ನೆ ಗೋಚರವಾಗಿದೆಯೇ? ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ಯಾರಾದರೂ ಒಬ್ಬ ವ್ಯಕ್ತಿ ನಿಮ್ಮ ಸಮರ್ಥನೆಯಲ್ಲಿ ರಂಗ ಪ್ರವೇಶಿಸಿದರೆ ನಿಮ್ಮ ಮಟ್ಟಿಗೆ ಅವನು ಹೊಂಡಕ್ಕೆ ಬೀಳುತ್ತಿರುವ ನಿಮ್ಮ ಕೈ ಹಿಡಿದು ರಕ್ಷಿಸಿ ಮೇಲೆತ್ತಿದಷ್ಟು ಔದಾರ್ಯ ತೋರಿದಷ್ಟು ಕೃತಜ್ಞತಾಭಾವ ನಿಮ್ಮಲ್ಲಿ ಉಂಟಾಗುತ್ತದೆ. ನಮ್ಮ ಮಾತು ಸರಿಯೇ?

ನೀವು ಕೂಡಾ ಜನರೊಂದಿಗೆ ಇಂತಹಾ ವರ್ತನೆಯನ್ನು ಅಭ್ಯಾಸ ಮಾಡಿಕೊಂಡು ನೋಡಿ. ಇದರ ಪರಿಣಾಮವು ಅದ್ಭುತವಾಗಿರುವುದು. ನೀವು ನಿಮ್ಮ ಯಾವುದಾದರೂ ಸ್ನೇಹಿತನ ಮನೆಗೆ ಹೋಗುತ್ತೀರಾ... ಅವರ ಕಿರಿಯ ಪುತ್ರ ಊಟದ ತಟ್ಟೆಯನ್ನು ಎತ್ತಿಕೊಂಡು ಬರುತ್ತಾನೆ. ಗಡಿಬಿಡಿಯಿಂದ ಎಡವಿ ತಟ್ಟೆ ಬೀಳುವುದರಿಂದ ಸ್ವಲ್ಪದರಲ್ಲಿ ಉಳಿಯಿತು. ಅವನ ತಂದೆ ಕೋಪಗೊಂಡು ಒಂದೇ ಸವನೆ ಅವನ ಮೇಲೆ ರೇಗಾಡುತ್ತಾ ಹೇಳಿದರು.

“ಗಡಿಬಿಡಿ ಏಕೆ?”

“ಎಷ್ಟು ಸಲ ನಿನಗೆ ಹೇಳಬೇಕು?”

“ನಿನಗೆ ಬುದ್ಧಿ ಬರುವುದು ಯಾವಾಗ?”

ಬಾಲಕನ ಮುಖವು ನಾಚಿಕೆ ಮತ್ತು ಅಪರಾಧ ಪ್ರಜ್ಞೆಯಿಂದ ಬಿಳಿಚಿಕೊಳ್ಳುವುದು.

ಈ ಸಂದರ್ಭದಲ್ಲಿ ಬಾಲಕನ ಪರವಹಿಸಿ ನೀವು “ಇಲ್ಲ! ಮಾಶಾ ಅಲ್ಲಾಹ್! ಇವನು ಬಹಳ ಧೈರ್ಯವಂತ. ಬಹಳ ಬುದ್ಧಿವಂತ. ಸ್ವಲ್ಪ ದುಡುಕು ಬುದ್ಧಿ ಇದೆ ಅಷ್ಟೆ. ದುಡುಕು ಬುದ್ಧಿ ಕೆಲವೊಮ್ಮೆ ಉಪಯೋಗಕ್ಕೆ ಬರುತ್ತೆ.”

ಅಲ್ಲಾಹು ಅಕ್ಬರ್! ಆ ಬಾಲಕ ನಿಮ್ಮ ಮಾತಿನಿಂದ ಎಷ್ಟು ಪ್ರಭಾವಿತನಾಗುತ್ತಾನೆ ನೋಡಿ. ನಿಮ್ಮ ಉಪಕಾರಕ್ಕೆ ಅವನು ನಿಮಗೆ ಚಿರಋಣಿಯಾಗಿರುತ್ತಾನೆ. ಮಕ್ಕಳು ಮಾತ್ರವಲ್ಲ, ದೊಡ್ಡವರು ಕೂಡಾ ಇಂತಹಾ ವರ್ತನೆಗೆ ಉತ್ಕೃಷ್ಟವಾದ ಪ್ರತಿಕ್ರಿಯೆಯನ್ನು ಪ್ರಕಟಿಸುವುದು ಖಂಡಿತ. ನಿಮ್ಮ ಒಬ್ಬ ಮಿತ್ರನಿಗೆ ನಿಮ್ಮ ಮಿತ್ರಮಂಡಳಿಯ ಸಭೆಯಲ್ಲಿ ಯಾವುದಾದರೂ ಪ್ರಮಾದಕ್ಕಾಗಿ ದೂಷಣೆಯ ಸುರಿಮಳೆ ಗೆರೆಯಲ್ಪಡುವ ಸಂದರ್ಭದಲ್ಲಿ ನೀವು ನಿಮ್ಮ ಮಿತ್ರನ ಒಂದೆರಡು ಸತ್ಕಾರ್ಯಗಳನ್ನು ಪ್ರಸ್ತಾಪಿಸುತ್ತಾ ಅವನ ನೆರವಿಗೆ ಬಂದು ನೋಡಿ.

ನಿಮ್ಮ ಕಿರಿಯ ಸಹೋದರನಿಗೆ ಯಾವುದಾದರೂ ಒಂದು ಸಣ್ಣ ಕಾರಣಕ್ಕೆ ಮನೆಮಂದಿ ಎಲ್ಲಾ ಸೇರಿ ತರಾಟೆಗೆ ತೆಗೆದುಕೊಳ್ಳುವಾಗ ನೀವು ಒಂದೆರಡು ಮಾತುಗಳಿಂದ ಅವನ ಜರ್ಜರಿತ ಹೃದಯಕ್ಕೆ ಸಮಾಧಾನವನ್ನುಂಟುಮಾಡಲು ಪ್ರಯತ್ನಿಸಿ ನೋಡಿ. ಅವನ ಮನಸ್ಸು ನಿಮ್ಮ ಈ ಕಾರ್ಯಕ್ಕಾಗಿ ಸದಾ ನಿಮಗೆ ಕೃತಜ್ಞತೆ ಪ್ರಕಟಿಸುವುದು. ಒಬ್ಬ ವ್ಯಕ್ತಿ ಜನರ ನಡುವೆ ಒಬ್ಬ ಯುವಕನೊಂದಿಗೆ “ಓ ಸಹೋದರಾ! ರಾಜಕುಮಾರಾ! ಯಾವ ಯೂನಿವರ್ಸಿಟಿಯಿಂದ

ನೀನು ಡಿಗ್ರಿ ಪಡೆದಿದ್ದೀಯಾ ಹೇಳು ನೋಡೋಣ...” ಎಂದು ಕೇಳುತ್ತಾ ಹಂಗಿಸತೊಡಗಿದಾಗ ಸಂಕೋಚದಿಂದ ಯುವಕನ ಮುಖ ಬಿಳಿಚಿಕೊಳ್ಳುತ್ತದೆ. ನಾನು ಬಹಳ ವಿನಮ್ರತೆಯಿಂದ ಒಂದು ಮಾತು ಹೇಳಿ ಅವನ ಮುಖದಿಂದ ಸಂಕೋಚವನ್ನು ಸರಿಸಿಬಿಟ್ಟೆ.

“ಏಕೆ ಮಾರಾಯರೇ, ಅವನ ಡಿಗ್ರಿಯ ಬಗ್ಗೆ ಏಕಷ್ಟು ಆಸಕ್ತಿಯಿಂದ ವಿಚಾರಿಸುತ್ತೀರಾ? ಅವನಿಗೇನಾದರೂ ಹೆಣ್ಣು ನೋಡಿದ್ದೀರಾ? ನೆಂಟಸ್ತಿಕೆಯ ಉದ್ದೇಶವಿದೆಯೇ? ಅಥವಾ ಏನಾದರೂ ಉದ್ಯೋಗ ಕೊಡಬಯಸಿದ್ದೀರಾ?” ನನ್ನ ಮಾತು ಕೇಳಿ ಜನರು ನಗಾಡಿದರು. ಅಲ್ಲಿ ಮಾತಿನ ವಿಷಯ ಬದಲಾಯಿತು. ಜನರ ಹೃದಯವನ್ನು ಗೆಲ್ಲುವ ಪ್ರೀತಿ ಸಂಪಾದಿಸುವ ಕೆಲವು ಸಂದರ್ಭಗಳಿರುತ್ತವೆ. ಕೆಲವು ವಿವೇಕಶಾಲಿಗಳಷ್ಟೇ ಆ ಸಂದರ್ಭಗಳನ್ನು ಸಂಪೂರ್ಣ ಸದುಪಯೋಗಪಡಿಸಿಕೊಳ್ಳುತ್ತಾರೆ.

ಓರ್ವ ಕವಿ ಹೇಳುತ್ತಾರೆ:

إِذَا هَبَّتْ رِيَاحُكَ فَاغْتَنِمْهَا

فَإِنَّ لِكُلِّ خَافِقَةٍ سُكُونُ

ಅಬ್ದುಲ್ಲ ಬಿನ್ ಮಸ್‌ಊದ್(ﷺ) ಪ್ರವಾದಿ(ﷺ) ಯವರ ಜೊತೆಗಿದ್ದರು. ಅವರಿಬ್ಬರೂ ಒಂದು ಮರದ ಬಳಿಯಿಂದ ಸರಿದು ಹೋಗುತ್ತಿದ್ದಾಗ ಪ್ರವಾದಿ(ﷺ) ಯವರು ಹೇಳಿದರು: “ಅಬ್ದುಲ್ಲ! ಮರವೇರಿ ನನಗಾಗಿ ಮಿಸ್ವಾಕ್ ಕಿತ್ತು ತನ್ನಿ.” ಇಬ್ನ್ ಮಸ್‌ಊದ್(ﷺ) ಒಬ್ಬ ಸಣಕಲು ದೇಹದ ವ್ಯಕ್ತಿಯಾಗಿದ್ದರು. ಮರವನ್ನು ಏರಿ ಮಿಸ್ವಾಕನ್ನು ಕೀಳತೊಡಗಿದರು. ಗಾಳಿ ಬೀಸಿತು. ಅವರ ದೇಹದ ಉಡುಪು ಸ್ವಲ್ಪ ಎತ್ತರಕ್ಕೆ ಹಾರಿತು. ಇದರಿಂದ ಅವರ ಸಣಕಲು ದೇಹ ಪ್ರದರ್ಶನಗೊಂಡಿತು. ಅಕ್ಕ-ಪಕ್ಕದ ಜನರು ಅವರ ಸಪೂರ ದೇಹವನ್ನು ಕಂಡು ನಗತೊಡಗಿದರು. ಪ್ರವಾದಿ(ﷺ) ಯವರು ಕೇಳಿದರು:

“ನೀವೇಕೆ ನಗುತ್ತಿದ್ದೀರಿ?”

“ಅವರ ಸಣಕಲು ದೇಹ ನೋಡಿ ನಗುತ್ತಿದ್ದೀರಾ?”

“ಯಾರ ಕೈಯಲ್ಲಿ ನನ್ನ ಪ್ರಾಣವಿದೆಯೋ ಅವನ ಮೇಲಾಣೆ! ಆ ಎರಡು ಸಪೂರ ಕಾಲುಗಳು ಮೀಝಾನ್‌ನಲ್ಲಿ ಉಹುದ್ ಪರ್ವತಕ್ಕಿಂತಲೂ ಹೆಚ್ಚು ಭಾರವಿರುವುದು.” (ಮುಸ್ನದ್ ಅಹ್ಮದ್ 1/421)

ಜನರು ತನ್ನ ಕಡೆಗೆ ನೋಡಿ ತಮಾಷೆ ಮಾಡಿ ನಗುತ್ತಿದ್ದಾಗ ಅಬ್ದುಲ್ಲ ಬಿನ್ ಮಸ್‌ಊದ್(ﷺ) ರವರ ಮನದಲ್ಲಿ ಎಂತಹಾ ಭಾವನೆ ಉಂಟಾಗಿರಬಹುದು? ಪ್ರವಾದಿ(ﷺ) ಯವರು ಸಕಾಲದಲ್ಲಿ ಹೇಳಿದ ಹೊಗಳಿಕೆಯ ಮಾತುಗಳು ಕ್ಷಣಾರ್ಧದಲ್ಲಿ ಅವರ ಮನದಲ್ಲಿನ ದುಗುಡವನ್ನು ನಿವಾರಿಸಿ ಸಂತೃಪ್ತಿಯ ಮೊಗ್ಗುಗಳನ್ನು ಅರಳಿಸಿರಬಹುದಲ್ಲವೇ?

ಜನರ ಪ್ರೀತಿ ಮತ್ತು ವಿಶ್ವಾಸವನ್ನು ಸಂಪಾದಿಸುವ ಕೆಲವು ಸಂದರ್ಭಗಳನ್ನು ವಿವೇಕಮತಿಗಳಷ್ಟೇ ಸದುಪಯೋಗಪಡಿಸಿಕೊಳ್ಳುತ್ತಾರೆ. ■

---

*19 ನೇ ಪುಟದಿಂದ*

## ಜಮ್ರಕ್ಕೆ ಕಲ್ಲೆಸೆಯುವುದರ ಉದ್ದೇಶ

ಅಲ್ಲ. ಆದ್ದರಿಂದ ಯುಕ್ತಿಯೇನೆಂದು ಅರಿಯದಿದ್ದರೂ ಸಹ ಅಲ್ಲಾಹನ ಆಜ್ಞೆಗೆ ತಲೆಬಾಗಿ ಅವನ ಅದೇಶಗಳನ್ನು ಪಾಲಿಸಿ ಜೀವಿಸಬೇಕಾದುದು ಮುಸಲ್ಮಾನನ ಪಾಲಿಗೆ ಕಡ್ಡಾಯವಾಗಿದೆ.

5. ಜಮ್ರಕ್ಕೆ ಕಲ್ಲೆಸೆಯುವಾಗ ತಾನು ಅಲ್ಲಾಹನ ಆಜ್ಞೆಯನ್ನು ಪಾಲಿಸುತ್ತಿದ್ದೇನೆಂಬ ಭಾವನೆ ಮುಸಲ್ಮಾನನಿಗೆ ಉಂಟಾಗುತ್ತದೆ. ಹಜ್ಜ್‌ಗೆ ಸಂಬಂಧಿಸಿದ ಎಲ್ಲ ಕರ್ಮಗಳನ್ನೂ ಮುಸಲ್ಮಾನನು ನಿಷ್ಠೆಯಿಂದ ನಿರ್ವಹಿಸುತ್ತಾನೆ. ಮೂರು ಜಮ್ರಗಳಿಗೆ ಕಲ್ಲೆಸೆಯುವುದು, ಅದಕ್ಕಾಗಿ ಏಳು ಕಲ್ಲುಗಳನ್ನು ಹೆಕ್ಕುವುದು, ಕಲ್ಲುಗಳನ್ನು ಒಂದರ ನಂತರ ಒಂದಾಗಿ ಎಸೆಯುವುದು, ಎಸೆಯುವ ಸಂದರ್ಭ ಇತರ ಮುಸಲ್ಮಾನರಿಗೆ ಮಾತಿನ ಮೂಲಕವೋ ಕೈಯ ಮೂಲಕವೋ ಯಾವುದೇ ಕಿರುಕುಳ ನೀಡದಿರುವುದು ಇದು ಮುಸಲ್ಮಾನನಿಗೆ ಅವನ ಜೀವನದ ಇತರೆಲ್ಲ ವಿಷಯಗಳಲ್ಲೂ ಹೀಗೆಯೇ ವ್ಯವಸ್ಥಿತವಾಗಿ ಜೀವಿಸಬೇಕೆಂಬ ಪಾಠವನ್ನು ಕಲಿಸುತ್ತದೆ.

6. ಜಮ್ರಕ್ಕೆ ಎಸೆಯಬೇಕಾದ ಕಲ್ಲುಗಳನ್ನು ಮುಸಲ್ಮಾನನು ಜಮ್ರಕ್ಕೆ ಮಾತ್ರ ಎಸೆಯುತ್ತಾನೆ. ಬೇರೆ ಎಲ್ಲೂ ಎಸೆಯುವುದಿಲ್ಲ. ಇದು ಮುಸಲ್ಮಾನನಿಗೆ ಅವನ ಜೀವನದ ಎಲ್ಲ ವಿಷಯಗಳಲ್ಲೂ ಅಲ್ಲಾಹು ಹೇಳಿದಂತೆಯೇ ಜೀವಿಸುವ, ಅವನು ಮಾಡಬೇಕೆಂದು ಹೇಳಿದ್ದನ್ನು ಮಾತ್ರ ಮಾಡುವ, ಅವನು ಬಿಡಬೇಕೆಂದು ಹೇಳಿದ್ದನ್ನು ಬಿಟ್ಟುಬಿಡುವ ಮೂಲಕ ಅವನಿಗೆ ಸಂಪೂರ್ಣ ಶರಣಾಗಿ ಜೀವಿಸುವ ತರಬೇತಿಯನ್ನು ನೀಡುತ್ತದೆ. ■

# ಪತ್ನಿಗೆ ಹೊಡೆಯುವ ಗಂಡ!

**ಪ್ರಶ್ನೆ:** ನನ್ನ ಪತ್ನಿ ಆಕೆಗೆ ಹೊಡೆದರೆ ಮಾತ್ರ ನನ್ನ ಮಾತು ಕೇಳುತ್ತಾಳೆ. ಆಕೆಯ ಈ ಸ್ವಭಾವವನ್ನು ಬದಲಾಯಿಸಲು ಏನು ಮಾಡಬೇಕು?

**ಉತ್ತರ** : ಸ್ತ್ರೀಯರು ಮತ್ತು ಅನಾಥರು ಪ್ರವಾದಿ(ﷺ) ಯವರು ದುರ್ಬಲರೆಂದು ಪರಿಗಣಿಸಿ ಅವರೊಂದಿಗೆ ಅನುಕಂಪದಿಂದ ವರ್ತಿಸಬೇಕೆಂದು ಆದೇಶಿಸಿದ ಎರಡು ವಿಭಾಗವಾಗಿದ್ದಾರೆ. ಹದೀಸ್ ಗ್ರಂಥಗಳಲ್ಲಿ ಈ ವಿಷಯಕ್ಕೆ ಸಂಬಂಧಪಟ್ಟಂತೆ ಪ್ರತ್ಯೇಕ ಅಧ್ಯಾಯಗಳೇ ಇವೆ. ಅವರು ಬೇರೆಯವರ ಅಧೀನದಲ್ಲಿ ಜೀವಿಸುವವರಾದ್ದರಿಂದ ತೊಂದರೆಗೀಡಾಗುವ ಸಾಧ್ಯತೆ ಹೆಚ್ಚಿದೆ. ಮೇಲಿನ ಪ್ರಶ್ನೆ ಕೇಳಿದ ವ್ಯಕ್ತಿ ಪತ್ನಿಗೆ ನಿರಂತರವಾಗಿ ಹೊಡೆಯುತ್ತಿದ್ದಾರೆನ್ನುವುದು ವ್ಯಕ್ತವಿದೆ.

ಹೀಗೆ ನಿರಂತರವಾಗಿ ಹೊಡೆತ ತಿನ್ನುತ್ತಿದ್ದ ಮತ್ತೊಂದು ವಿಭಾಗ ನಮ್ಮ ಮನಸ್ಸಿನಲ್ಲಿ ಬರುವುದಾದರೆ ಅದು ಹಿಂದಿನ ಕಾಲದ ಗುಲಾಮರಾಗಿದ್ದರು. ಹೊಡೆಯುವ ಗಂಡನೊಂದಿಗೆ ನೀವೇಕೆ ಆಕೆಗೆ ಹೊಡೆಯುತ್ತಿದ್ದೀರಿ ಎಂದು ಕೇಳಿದರೆ ಪ್ರಾಯಶಃ ಅವನು ಅವಳು ಅದನ್ನು ಕೇಳಿ ಪಡೆಯುತ್ತಿದ್ದಾಳೆಂದು ಹೇಳಿಬಹುದು!

ಜೀವನದಲ್ಲಿ ದೇಹ ಮತ್ತು ಮನಸ್ಸು ಒಂದಾಗಿ ಜೀವಿಸಬೇಕಾದವರು ಹೀಗೆ ಪರಸ್ಪರ ಕಚ್ಚಾಡಿಕೊಂಡು ಹೊಡೆತ-ಬಡಿತದಲ್ಲಿ ಕಾಲಕಳೆದರೆ ಸುಮಧುರ ದಾಂಪತ್ಯಕ್ಕೆ ಅವಕಾಶವೆಲ್ಲಿದೆ? ಪ್ರವಾದಿ(ﷺ) ಯವರು ಹೇಳಿದ್ದು ಅದೆಷ್ಟು ಸತ್ಯವಾಗಿದೆ!

“ನಿಮ್ಮಲ್ಲಿ ಯಾರೂ ಕೂಡಾ ಗುಲಾಮನಿಗೆ ಹೊಡೆಯುವಂತೆ ನಿಮ್ಮ ಪತ್ನಿಯರಿಗೆ ಹೊಡೆಯಬಾರದು. ಅನಂತರ ರಾತ್ರಿಯಲ್ಲಿ ಅವರೊಂದಿಗೆ ಬೆರೆಯಿರಿ.” (ಬುಖಾರಿ)

ಸ್ತ್ರೀಯರ ಮಟ್ಟಿಗೆ ಯಾವುದಾದರೂ ಕೆಲವು ತಕರಾರುಗಳು ಸ್ವಾಭಾವಿಕವಾಗಿದೆ. ಅದನ್ನು ಸರಿಪಡಿಸಲು ಯಾರಾದರೂ ಹೊಡೆತವನ್ನು ಅಸ್ತ್ರವನ್ನಾಗಿ ಬಳಸಿಕೊಂಡರೆ ಜೀವನಪರ್ಯಂತ ಅವಳಿಗೆ ಹೊಡೆಯಬೇಕಾದೀತು.

ಕೆಲವರಿಗೆ ಸಂಶಯ ರೋಗವಿದೆ. ಸದಾಕಾಲ ಅದಕ್ಕೆ ಸಂಬಂಧಪಟ್ಟ ಪ್ರಶ್ನೆಗಳನ್ನು ಕೇಳುತ್ತಲೇ ಇರುತ್ತಾರೆ. ಕೆಲವು ಪತ್ನಿಯರು ಗಂಡನನ್ನು ಅನುಸರಿಸದವರಾಗಿರಬಹುದು. ಇನ್ನು ಕೆಲವರು ಸದಾಕಾಲ ಗಂಡನಿಗೆ ಪ್ರತ್ಯುತ್ತರ ನೀಡುವವರಾಗಿರಬಹುದು. ಇವುಗಳಿಗೆಲ್ಲ ಪರಿಹಾರ ಹೊಡೆತವಲ್ಲ. ಆಕೆಯಲ್ಲಿರುವ ಈ ಗುಣಗಳನ್ನು ದೂರೀಕರಿಸಲು ಸಾವಧಾನವಾಗಿ ಪ್ರಯತ್ನಿಸಬೇಕು. ಅವಳಲ್ಲಿರುವ ಕೆಡುಕುಗಳನ್ನು ಎತ್ತಿ ತೋರಿಸುವಂತೆ ಒಳಿತನ್ನೂ ಪ್ರೋತ್ಸಾಹಿಸುವುದನ್ನೂ ಕಲಿಯಬೇಕು. ಪ್ರೀತಿಪೂರ್ವಕ ವರ್ತನೆಯಿಂದ ಯಾರನ್ನೂ ಒಲಿಸಿಕೊಳ್ಳಬಹುದಾಗಿದೆ. ಸ್ತ್ರೀ ಪ್ರೀತಿಯನ್ನು ಇಷ್ಟಪಡುವವಳಾಗಿದ್ದಾಳೆ. ಹೀಗೆ ಪ್ರೀತಿಸಲು ಸಾಧ್ಯವಾಗುವ ಗಂಡನಿಗೆ ಸ್ತ್ರೀ ಯಾವತ್ತೂ ಒಲಿಯುತ್ತಾಳೆ.

ಹೊಡೆಯುವವನಿಗೆ ಆ ತಪ್ಪಿನ ಗಂಭೀರತೆಯನ್ನು ತಿಳಿಯಲು ಪ್ರಮಾಣದ ಕೆಲವು ವಚನಗಳನ್ನು ಈ ಕೆಳಗೆ ನೀಡಲಾಗಿದೆ.

1. “ಆಕೆಯೊಂದಿಗೆ ಅತ್ಯುತ್ತಮವಾಗಿ ವರ್ತಿಸಿರಿ” ಎಂದು ಕುರ್‌ಆನ್ ಹೇಳಿದೆ. ಇದನ್ನು ಉಲ್ಲಂಘಿಸಿ ಆಕೆಗೆ ಹೊಡೆಯುತ್ತೀರಾ?

2. ಯಾರೊಂದಿಗಾದರೂ ಅಕ್ರಮವೆಸಗುವುದನ್ನು ಪವಿತ್ರ ಕುರ್‌ಆನ್ ವಿರೋಧಿಸಿದೆ. ಒಂದು ಕುದ್ಸೀ ಹದೀಸಿನಲ್ಲಿ ಅಲ್ಲಾಹನು ಹೇಳುತ್ತಾನೆ: “ಓ ನನ್ನ ದಾಸರೇ, ನಾನು ನನ್ನ ಮೇಲೆ

*36 ನೇ ಪುಟಕ್ಕೆ*

# ಗೆಳೆಯರು—ಕುರ್‌ಆನಿನ ದೃಷ್ಟಿಯಲ್ಲಿ

﴿ إِنَّمَا وَلِيُّكُمُ ٱللَّهُ وَرَسُولُهُۥ وَٱلَّذِينَ ءَامَنُوا۟ ٱلَّذِينَ يُقِيمُونَ ٱلصَّلَوٰةَ وَيُؤْتُونَ ٱلزَّكَوٰةَ وَهُمْ رَٰكِعُونَ ﴿٥٥﴾ ﴾

"ನಿಮ್ಮ ಆಪ್ತಮಿತ್ರರು ವಾಸ್ತವದಲ್ಲಿ ಅಲ್ಲಾಹ್, ಆತನ ಸಂದೇಶವಾಹಕರು ಮತ್ತು ನಮಾಝುನ್ನು ಸಂಸ್ಥಾಪಿಸುವ, ಝುಕಾತ್ ಕೊಡುವ ಹಾಗೂ ಅಲ್ಲಾಹನ ಮುಂದೆ ಬಾಗುವ ಸತ್ಯವಿಶ್ವಾಸಿಗಳು ಮಾತ್ರ." (5:55)

﴿ لَّا يَتَّخِذِ ٱلْمُؤْمِنُونَ ٱلْكَٰفِرِينَ أَوْلِيَآءَ مِن دُونِ ٱلْمُؤْمِنِينَ ۖ وَمَن يَفْعَلْ ذَٰلِكَ فَلَيْسَ مِنَ ٱللَّهِ فِى شَىْءٍ إِلَّآ أَن تَتَّقُوا۟ مِنْهُمْ تُقَىٰةً ۗ وَيُحَذِّرُكُمُ ٱللَّهُ نَفْسَهُۥ ۗ وَإِلَى ٱللَّهِ ٱلْمَصِيرُ ﴿٢٨﴾ ﴾

"ಸತ್ಯವಿಶ್ವಾಸಿಗಳು ಸತ್ಯವಿಶ್ವಾಸಿಗಳನ್ನು ಬಿಟ್ಟು ಸತ್ಯನಿಷೇಧಿಗಳನ್ನು ತಮ್ಮ ಆತ್ಮೀಯ ಸ್ನೇಹಿತರನ್ನಾಗಿ ಎಂದಿಗೂ ಮಾಡಬಾರದು. ಹಾಗೆ ಮಾಡುವವನ ಸಂಬಂಧ ಅಲ್ಲಾಹನೊಂದಿಗೆ ಏನೂ ಇರುವುದಿಲ್ಲ. ನೀವು ಅವರ ಮರ್ದನದಿಂದ ತಪ್ಪಿಸಿಕೊಳ್ಳಲು ತೋರಿಕೆಗಾಗಿ ಈ ವಿಧಾನವನ್ನನುಸರಿಸಿದರೆ ಅದಕ್ಕೆ ಕ್ಷಮೆ ಇದೆ. ಆದರೆ ಅಲ್ಲಾಹು ಸ್ವತಃ ತನ್ನ ಬಗ್ಗೆ (ಭಯಪಡಬೇಕೆಂದು) ನಿಮಗೆ ಎಚ್ಚರಿಕೆ ನೀಡುತ್ತಿದ್ದಾನೆ ಮತ್ತು ನಿಮಗೆ ಆತನ ಕಡೆಗೇ ಮರಳಿ ಹೋಗಲಿಕ್ಕಿದೆ." (3:28)

﴿ يَٰٓأَيُّهَا ٱلَّذِينَ ءَامَنُوا۟ لَا تَتَّخِذُوا۟ عَدُوِّى وَعَدُوَّكُمْ أَوْلِيَآءَ تُلْقُونَ إِلَيْهِم بِٱلْمَوَدَّةِ وَقَدْ كَفَرُوا۟ بِمَا جَآءَكُم مِّنَ ٱلْحَقِّ يُخْرِجُونَ ٱلرَّسُولَ وَإِيَّاكُمْ ﴾

"ಸತ್ಯವಿಶ್ವಾಸಿಗಳೇ, ನೀವು ನನ್ನ ಮಾರ್ಗದಲ್ಲಿ ಹೋರಾಡುವುದಕ್ಕಾಗಿ ಹಾಗೂ ನನ್ನ ಸಂಪ್ರೀತಿಗಾಗಿ ಹೊರಟಿರುವಿರಾದರೆ ನನ್ನ ಮತ್ತು ನಿಮ್ಮ ಶತ್ರುಗಳನ್ನು ಮಿತ್ರರಾಗಿ ಮಾಡಿಕೊಳ್ಳಬೇಡಿರಿ. ನೀವು ಅವರೊಂದಿಗೆ ಸ್ನೇಹ ಬೆಳೆಸುತ್ತೀರಿ. ವಸ್ತುತಃ ನಿಮ್ಮ ಬಳಿಗೆ ಬಂದಿರುವ ಸತ್ಯವನ್ನು ಅವರು ತಿರಸ್ಕರಿಸಿ ಬಿಟ್ಟಿರುವರು. ನೀವು ನಿಮ್ಮ ಪ್ರಭುವಾಗಿರುವ ಅಲ್ಲಾಹನ ಮೇಲೆ ವಿಶ್ವಾಸವಿರಿಸಿದ್ದೀರೆಂಬ ತಪ್ಪಿಗಾಗಿ ಮಾತ್ರ ಸಂದೇಶವಾಹಕರನ್ನೂ ನಿಮ್ಮನ್ನೂ ದೇಶಭ್ರಷ್ಟಗೊಳಿಸುವುದೇ ಅವರ ಧೋರಣೆಯಾಗಿದೆ.." (60:1)

﴿ يَٰٓأَيُّهَا ٱلَّذِينَ ءَامَنُوا۟ كُونُوا۟ قَوَّٰمِينَ لِلَّهِ شُهَدَآءَ بِٱلْقِسْطِ ۖ وَلَا يَجْرِمَنَّكُمْ شَنَـَٔانُ قَوْمٍ عَلَىٰٓ أَلَّا تَعْدِلُوا۟ ۚ ٱعْدِلُوا۟ هُوَ أَقْرَبُ لِلتَّقْوَىٰ ۖ ﴾

"ಈ ಸತ್ಯವಿಶ್ವಾಸಿಗಳೇ, ನೀವು ಅಲ್ಲಾಹನಿಗಾಗಿ ಸತ್ಯದಲ್ಲೇ ನೆಲೆನಿಲ್ಲುವವರು, ನ್ಯಾಯದ ಸಾಕ್ಷ್ಯವಹಿಸುವವರೂ ಆಗಿರಿ. ಒಂದು ವಿಭಾಗದ ಮೇಲಿನ ದ್ವೇಷವು ನಿಮ್ಮನ್ನು ನ್ಯಾಯದಿಂದ ವಿಮುಖರಾಗುವಷ್ಟು ರೇಗಿಸದಿರಲಿ. ನ್ಯಾಯ ಪಾಲಿಸಿರಿ. ಇದು ದೇವಭಯಕ್ಕೆ ಹೆಚ್ಚು ಅನುಗುಣವಾಗಿರುತ್ತದೆ." (5:8)

﴿ يَٰٓأَيُّهَا ٱلَّذِينَ ءَامَنُوا۟ لَا تَتَّخِذُوا۟ ٱلَّذِينَ ٱتَّخَذُوا۟ دِينَكُمْ

هُزُوًا وَلَعِبًا مِّنَ ٱلَّذِينَ أُوتُوا۟ ٱلْكِتَٰبَ مِن قَبْلِكُمْ
وَٱلْكُفَّارَ أَوْلِيَآءَ ۚ وَٱتَّقُوا۟ ٱللَّهَ إِن كُنتُم مُّؤْمِنِينَ ﴿٥٧﴾

"ಓ ಸತ್ಯವಿಶ್ವಾಸಿಗಳೇ, ನಿಮ್ಮ ಪೂರ್ವಗಾಮಿ ಗ್ರಂಥದವರ ಪೈಕಿ, ನಿಮ್ಮ ಧರ್ಮವನ್ನು ಅಣಕ ಹಾಗೂ ಹಾಸ್ಯ ವಿನೋದದ ಸಾಧನ ಮಾಡಿಕೊಂಡವರನ್ನೂ ಇತರ ಸತ್ಯನಿಷೇಧಿಗಳನ್ನೂ ನಿಮ್ಮ ಗೆಳೆಯ ಹಾಗೂ ಆಪ್ತಸ್ನೇಹಿತರನ್ನಾಗಿ ಮಾಡಿಕೊಳ್ಳಬೇಡಿರಿ. ನೀವು ಸತ್ಯವಿ-ಶ್ವಾಸಿಗಳಾಗಿದ್ದರೆ ಅಲ್ಲಾಹನನ್ನು ಭಯಪಡಿರಿ." (5:57)

وَإِذَا نَادَيْتُمْ إِلَى ٱلصَّلَوٰةِ ٱتَّخَذُوهَا هُزُوًا وَلَعِبًا ۚ
ذَٰلِكَ بِأَنَّهُمْ قَوْمٌ لَّا يَعْقِلُونَ ﴿٥٨﴾

"ನೀವು ನಮಾಝಿಗಾಗಿ ಕರೆ ನೀಡಿದಾಗ ಅವರು ಅದನ್ನು ಗೇಲಿ ಮಾಡಿ ಆಟವಾಡುತ್ತಾರೆ. ಅವರು ಬುದ್ಧಿಹೀನರಾದುದರಿಂದಲೇ ಹಾಗೆ ಮಾಡುತ್ತಾರೆ." (5:58)

لَّا يَنْهَىٰكُمُ ٱللَّهُ عَنِ ٱلَّذِينَ لَمْ يُقَٰتِلُوكُمْ فِى ٱلدِّينِ
وَلَمْ يُخْرِجُوكُم مِّن دِيَٰرِكُمْ أَن تَبَرُّوهُمْ وَتُقْسِطُوٓا۟
إِلَيْهِمْ ۚ إِنَّ ٱللَّهَ يُحِبُّ ٱلْمُقْسِطِينَ ﴿٨﴾

"ಧರ್ಮದ ವಿಷಯದಲ್ಲಿ ನಿಮ್ಮೊಡನೆ ಯುದ್ಧ ಮಾಡಿರದ ಹಾಗೂ ನಿಮ್ಮನ್ನು ನಿಮ್ಮ ಮನೆಗಳಿಂದ ಹೊರಹಾಕದವರೊಂದಿಗೆ ಸೌಜನ್ಯ ಹಾಗೂ ನ್ಯಾಯದೊಂದಿಗೆ ವರ್ತಿಸುವುದರಿಂದ ಅಲ್ಲಾಹನು ನಿಮ್ಮನ್ನು ತಡೆಯುವುದಿಲ್ಲ. ಅಲ್ಲಾಹನು ನ್ಯಾಯಪಾಲನೆ ಮಾಡು-ವವರನ್ನು ಪ್ರೀತಿಸುತ್ತಾನೆ." (60:8)

إِنَّمَا يَنْهَىٰكُمُ ٱللَّهُ عَنِ ٱلَّذِينَ قَٰتَلُوكُمْ فِى ٱلدِّينِ
وَأَخْرَجُوكُم مِّن دِيَٰرِكُمْ وَظَٰهَرُوا۟ عَلَىٰٓ إِخْرَاجِكُمْ أَن
تَوَلَّوْهُمْ ۚ وَمَن يَتَوَلَّهُمْ فَأُو۟لَٰٓئِكَ هُمُ ٱلظَّٰلِمُونَ ﴿٩﴾

"ಧರ್ಮದ ವಿಷಯದಲ್ಲಿ ನಿಮ್ಮ ವಿರುದ್ಧ ಯುದ್ಧ ಮಾಡಿರುವ ಹಾಗೂ ನಿಮ್ಮನ್ನು ನಿಮ್ಮ ಮನೆಗಳಿಂದ ಹೊರ ಹಾಕಿರುವ ಮತ್ತು ನಿಮ್ಮನ್ನು ಹೊರಹಾಕುವ ವಿಷಯದಲ್ಲಿ ಪರಸ್ಪರ ಸಹಕರಿಸಿರುವ ಜನರೊಂದಿಗೆ ಸ್ನೇಹ ಬೆಳೆಸುವುದರಿಂದ ಮಾತ್ರ ಅಲ್ಲಾಹನು ನಿಮ್ಮನ್ನು ತಡೆಯುತ್ತಾನೆ. ಅವರೊಂದಿಗೆ ಸ್ನೇಹ ಬೆಳೆಸುವವವರೇ ಅಕ್ರಮಿಗಳು." (60:9)

وَيَوْمَ يَعَضُّ ٱلظَّالِمُ عَلَىٰ يَدَيْهِ يَقُولُ
يَٰلَيْتَنِى ٱتَّخَذْتُ مَعَ ٱلرَّسُولِ سَبِيلًا ﴿٢٧﴾ يَٰوَيْلَتَىٰ
لَيْتَنِى لَمْ أَتَّخِذْ فُلَانًا خَلِيلًا ﴿٢٨﴾ لَّقَدْ أَضَلَّنِى
عَنِ ٱلذِّكْرِ بَعْدَ إِذْ جَآءَنِى ۗ وَكَانَ
ٱلشَّيْطَٰنُ لِلْإِنسَٰنِ خَذُولًا ﴿٢٩﴾

"ಆ ದಿನ ಅಕ್ರಮಿಯು ತನ್ನ ಕೈಗಳನ್ನು ಕಚ್ಚಿಕೊಳ್ಳುವನು ಮತ್ತು ಅಕಟ! ನಾನು ಪ್ರವಾದಿಯೊಂದಿಗೆ ಸಹಕರಿಸುತ್ತಿದ್ದರೆ! ಅಯ್ಯೋ ನನ್ನ ದುರ್ದೆಸೆಯೇ! ಅಕಟ! ನಾನು ಆ ವ್ಯಕ್ತಿಯನ್ನು ಮಿತ್ರನಾಗಿ ಮಾಡಿಕೊಳ್ಳದಿರುತ್ತಿದ್ದರೆ! ಅವನ ದುರ್ಬೋಧನೆಗೆ ಮರುಳಾಗಿ ನನ್ನ ಬಳಿಗೆ ಬಂದ ಸದ್ಬೋಧನೆಯನ್ನು ನಾನು ಸ್ವೀಕರಿಸಲಿಲ್ಲ. ಶೈತಾನನು ಮಾನವನ ಮಟ್ಟಿಗೆ ಮಹಾ ವಿಶ್ವಾಸಘಾತುಕನಾಗಿ ಬಿಟ್ಟನು ಎಂದು ಹೇಳುವನು." (25:27-29) ■

*34 ನೇ ಪುಟದಿಂದ*

## ಪತ್ನಿಗೆ ಹೊಡೆಯುವ ಗಂಡ!

ಅಕ್ರಮವನ್ನು ನಿಷೇಧಗೊಳಿಸಿದ್ದೇನೆ. ನಿಮ್ಮ ನಡುವೆಯೂ ನಾನು ಅದನ್ನು ನಿಷೇಧಗೊಳಿಸಿದ್ದೇನೆ. ಆದುದರಿಂದ ನೀವು ಅಕ್ರಮವೆಸಗದಿರಿ."

3. ಬಹುತೇಕ ಮಂದಿ ಮುಖಕ್ಕೆ ಹೊಡೆಯುವುದಿದೆ. ಇದು ವಿಶೇಷತಃ ವಿರೋಧಿಸಲ್ಪಟ್ಟ ಕಾರ್ಯವಾಗಿದೆ. ಜಾಬಿರ್(ﷺ) ಅವರಿಂದ ನಿವೇದನೆ. ಪ್ರವಾದಿ(ﷺ) ಯವರು ಮುಖಕ್ಕೆ ಹೊಡೆ-ಯುವುದನ್ನು ವಿರೋಧಿಸಿದ್ದಾರೆ.

4. ತಾಯಿಗೆ ಹೊಡೆಯುವ ಮಕ್ಕಳು ದೂರವ್ಯಾಪಕವಾದ ಪ್ರತ್ಯಾ-ಘಾತಗಳನ್ನು ಅನುಭವಿಸುತ್ತಾರೆ.

5. ನಿರಂತರವಾಗಿ ಮರ್ದನಗಳು ಮಾನಸಿಕ ಸಮಸ್ಯೆಗೆ ಕಾರಣವಾದರೆ ಜೀವನವೇ ಅಸಹನೀಯವಾಗಿ ಪರಿಣಮಿಸ-ಬಹುದು. ■

# ಇಮಾಮ್ ಶಾಫಿಈಯವರ ಅಮೃತವಾಣಿ

ಇಮಾಮ್ ಶಾಫಿಈಯವರ ಉಪದೇಶಗಳು ಅರ್ಥವತ್ತಾಗಿದೆ. ಅವುಗಳು ಜ್ಞಾನ ಮತ್ತು ಜೀವನದ ಅನುಭವಗಳು ಮೇಳೈಸಿರುವ ಸಂಕ್ಷಿಪ್ತ ವಾಕ್ಯಗಳಾಗಿವೆ. ಅವುಗಳಲ್ಲಿ ಕೆಲವು ಹೀಗಿದೆ:

ಮಾರಣಾಂತಿಕವಾದ ಕಾಯಿಲೆಯಿಂದ ಹಾಸಿಗೆ ಹಿಡಿದ ಇಮಾಮರನ್ನು ನೋಡಲು ಹೋದ ಸ್ನೇಹಿತನೊಂದಿಗೆ ಅವರು ಹೇಳಿದರು: "ನಾನು ಇಹಲೋಕಕ್ಕೆ ವಿದಾಯ ಕೋರುತ್ತಿದ್ದೇನೆ. ಗೆಳೆಯರನ್ನು ಅಗಲುತ್ತಿದ್ದೇನೆ. ನನ್ನ ಕರ್ಮಗಳ ಫಲವನ್ನು ಅನುಭವಿಸಲು ತೆರಳುತ್ತಿದ್ದೇನೆ. ಮರಣದ ಪಾನಪಾತ್ರೆಯನ್ನು ಕುಡಿಯಲು ಸಿದ್ಧನಾಗಿ ನಿಂತಿದ್ದೇನೆ. ಪ್ರಭುವಿನ ಬಳಿಗೆ ಮರಳುತ್ತಿದ್ದೇನೆ. ನನ್ನ ಆತ್ಮ ಸ್ವರ್ಗದಲ್ಲಿರುತ್ತದೋ ನರಕದಲ್ಲಿರುತ್ತದೋ ಎನ್ನುವುದು ನನಗೆ ತಿಳಿದಿಲ್ಲ."

**********

ಇಮಾಮ್ ಶಾಫಿಈ ಮತ್ತು ಶಿಷ್ಯರು ಪೇಟೆಯಲ್ಲಿ ನಡೆದುಕೊಂಡು ಹೋಗುತ್ತಿದ್ದಾಗ ಒಬ್ಬನು ಮತ್ತೊಬ್ಬನನ್ನು ಕೆಟ್ಟದಾಗಿ ಆಡಿಕೊಳ್ಳುತ್ತಿರುವುದನ್ನು ಆಲಿಸಿದರು. ಆಗ ಇಮಾಮ್ ಶಿಷ್ಯರೊಂದಿಗೆ ಹೇಳಿದರು: "ಅತ್ತ ಗಮನಹರಿಸಬೇಡಿರಿ. ಅನಗತ್ಯ ಮಾತಿನಂತೆ ಅದನ್ನು ಆಲಿಸುವುದು ಕೂಡಾ ಪಾಪವಾಗಿದೆ. ಆಲಿಸುವವನು ಆಡುವವನ ಪಾಲುದಾರನಾಗುತ್ತಾನೆ. ದುಷ್ಟನು ತನ್ನ ಪಾತ್ರೆಯಲ್ಲಿರುವ ಕೆಟ್ಟ ವಸ್ತುಗಳನ್ನು ನಿಮ್ಮ ಪಾತ್ರೆಗೆ ಹಾಕಲು ಪ್ರಯತ್ನಿಸುತ್ತಾನೆ. ಅವನ ಮಾತುಗಳನ್ನು ನಿರ್ಲಕ್ಷಿಸಿರಿ. ಅವನಂತೆಯೇ ಉತ್ತರಿಸುವುದು ಮೂರ್ಖತನ."

**********

ಬೇರೆ ಕೆಲವು ಸಂದರ್ಭಗಳಲ್ಲಿ ಇಮಾಮ್ ಶಾಫಿಈ ಹೇಳಿದರು: "ನಾನು ಪ್ರಚುರಪಡಿಸುತ್ತಿರುವ ಜ್ಞಾನ ಜನರಿಗೆ ಉಪಕಾರಪ್ರದವಾಗಬೇಕೆಂದು ನಾನು ಆಗ್ರಹಿಸುತ್ತೇನೆ. ಅನ್ಯಥಾ, ಅದರಿಂದ ನನಗೆ ಏನಾದರೂ ಲಾಭ ಸಿಗಲಿ ಎಂಬ ಆಸೆಯಲ್ಲ."

**********

"ನಾನು ಯಾರೊಂದಿಗೆ ಏನಾದರೂ ಮಾತನಾಡುವಾಗ ನನಗೆ ಒಂದೇ ಒಂದು ಉದ್ದೇಶವಿರುತ್ತದೆ. ಅದು ಆ ವ್ಯಕ್ತಿ ಸಜ್ಜನನಾಗಬೇಕು, ಸನ್ಮಾರ್ಗದೆಡೆಗೆ ಬರಬೇಕು ಮತ್ತು ಅವನಿಗೆ ಅಲ್ಲಾಹನ ಸಂರಕ್ಷಣೆ ಲಭಿಸಬೇಕು ಎಂದಾಗಿದೆ."

**********

"ಎದುರಾಳಿಯನ್ನು ಸೋಲಿಸಬೇಕೆಂಬ ಉದ್ದೇಶದಿಂದ ನಾನು ಯಾವತ್ತೂ ವಾದ-ಪ್ರತಿವಾದ ನಡೆಸಿಲ್ಲ."

**********

"ನೀವು ಮಾಡುವ ಕಾರ್ಯದಲ್ಲಿ ನಿಮಗೆ ಅಹಂಕಾರ ಉಂಟಾಗುತ್ತದೆಯೇ ಎಂಬ ಭಯ ತೋಚಿದಾಗ ಇಲ್ಲಿ ವಿವರಿಸಿರುವ ಕಾರ್ಯಗಳ ಕುರಿತು ಚಿಂತಿಸಬೇಕು: ನೀವು ಯಾಚಿಸುವ ದೇವನ ಪ್ರೀತಿ, ನೀವು ಆಗ್ರಹಿಸುವ ಪ್ರತಿಫಲ, ನೀವು ಭಯಪಡುವ ಶಿಕ್ಷೆ, ನೀವು ಸಂತೋಷದಿಂದ ಸ್ಮರಿಸುವ ನಿಮ್ಮ ಆರೋಗ್ಯ, ಭಯದೊಂದಿಗೆ ಸ್ಮರಿಸುವ ಕಷ್ಟಕಾರ್ಪಣ್ಯ. ಈ ಪೈಕಿ ಯಾವುದಾದರೂ ಒಂದನ್ನು ನೆನಪು ಮಾಡಿಕೊಂಡರೆ ನಿಮ್ಮ ಕರ್ಮ ತುಂಬಾ ಕಡಿಮೆಯಾಗಿದೆ ಎಂದು ತಿಳಿಯುತ್ತದೆ. ಆಗ ಅಹಂಕಾರ ಮಾಯವಾಗುತ್ತದೆ."

**********

"ಲೋಕ ಮತ್ತು ಅಲ್ಲಾಹನನ್ನು ಸಮಾನವಾಗಿ ಪ್ರೀತಿಸುತ್ತೇನೆ ಎಂದು

*39 ನೇ ಪುಟಕ್ಕೆ*

# ಅಲ್ಲಾಹನ ಬಳಿಯಲ್ಲಿರುವುದು ಉತ್ತಮ

ಖಲೀಫ ಉಮರ್(ﷺ) ಅವರ ಆಡಳಿತ ಕಾಲ. ಒಂದು ಶುಕ್ರವಾರ ಅಮೀರುಲ್ ಮುಅ್‌ಮಿನೀನ್ ಖುತುಬಃ ಆರಂಭಿಸಿದರು. ತುಸು ಹೊತ್ತಿನ ಬಳಿಕ ಉಸ್ಮಾನ್(ﷺ) ರವರು ಮಸೀದಿಗೆ ಬಂದರು. ತಹಿಯ್ಯತ್ ನಮಾಝಿಗೆ ಸಿದ್ಧತೆ ಆರಂಭಿಸುವಾಗ, ಮಿಂಬರ್‌ನಿಂದ ಖಲೀಫರ ಪ್ರಶ್ನೆ ಕೇಳಿ ಬಂತು: "ಉಸ್ಮಾನ್, ನೀವು ಈ ತನಕ ಎಲ್ಲಿದ್ದಿರಿ?"

"ಅಮೀರುಲ್ ಮುಅ್‌ಮಿನೀನ್, ನಾನು ಕಾರ್ಯನಿಮಿತ್ತ ತುರ್ತಾಗಿ ಒಂದೆಡೆಗೆ ಹೋಗಬೇಕಾಯಿತು. ಬರುವಾಗ ಸ್ವಲ್ಪ ತಡವಾಯಿತು." ಉಸ್ಮಾನ್(ﷺ) ರು ಕಾರಣವನ್ನು ನಿವೇದಿಸಿಕೊಂಡರು.

ಪುನಃ ಖಲೀಫರ ಪ್ರಶ್ನೆ: "ಜುಮುಅಕ್ಕೆ ಅದಾನ್‌ನ ನಂತರ ಬರುವವರ ಸ್ಥಿತಿ ಏನೆಂದು ನಿಮಗೆ ಗೊತ್ತಿದೆಯಲ್ಲ?" ಉಸ್ಮಾನ್ ಮೌನವಾದರು. (ಮುಸ್ಲಿಮ್ ಉಲ್ಲೇಖಿಸಿದ ಹದೀಸಿನ ತಿರುಳು)

ನಮ್ಮ ಆಯುಷ್ಕಾಲದಲ್ಲಿ ಅದೆಷ್ಟೋ ಶುಕ್ರವಾರಗಳು ಕಳೆದುಹೋದವು? ನಾವು ಅದೆಷ್ಟು ಜುಮುಅಃ ನಮಾಝ್ ಗಳಲ್ಲಿ ಪಾಲ್ಗೊಂಡಿದ್ದೇವೆ?

ಶುಕ್ರವಾರ ಜುಮುಅಃ ಖುತುಬಾ ಹಾಗೂ ನಂತರದ ಎರಡು ರಕಅತ್ ನಮಾಝ್‌ನಲ್ಲಿ ಪಾಲ್ಗೊಳ್ಳುವವರಿಗೆ ಅಲ್ಲಾಹನು ದಯಪಾಲಿಸುವ ಪ್ರತಿಫಲ ಎಷ್ಟೆಂದು ಪ್ರವಾದಿ(ﷺ) ಯವರು ವಿವರಿಸಿದ್ದಾರೆ. ಶುಕ್ರವಾರ ಸ್ನಾನ ಮಾಡಿ ಬೇಗನೆ ಮಸೀದಿಗೆ ಆಗಮಿಸುವವರಿಗೆ ಒಂಟೆಯನ್ನು ದಿಬ್ಬ ಮಾಡಿ ದಾನ ಮಾಡಿದಷ್ಟು ಪುಣ್ಯವಿದೆ. ಅದರ ನಂತರ ಬರುವವರಿಗೆ ಕ್ರಮವಾಗಿ ಹಸು, ಮೇಕೆ, ಕೋಳಿಯವನ್ನು ದಿಬ್ಬ ಮಾಡಿ ದಾನ ಮಾಡಿದಷ್ಟು ಪ್ರತಿಫಲ ಲಭ್ಯವಾಗುತ್ತದೆ. ಇಮಾಮ್ ಮಿಂಬರ್ಗೆ ಹತ್ತು ಸಮಯದಲ್ಲಿ ಆಗಮಿಸುವವನಿಗೆ ಕೋಳಿಯ ಮೊಟ್ಟೆ ದಾನ ಮಾಡಿದಷ್ಟು ಪುಣ್ಯವಿದೆ. (ಅಬೂ ಹುರೈರಾ(ﷺ) ಅವರಿಂದ ಒಂದು ನಿವೇದಕರ ತಂಡ ಉಲ್ಲೇಖಿಸಿದ್ದು)

ಇವೆಲ್ಲವೂ ನಮಗೆ ಗೊತ್ತಿರದ ವಿಷಯಗಳಾಗಿವೆಯೇ? ಆದರೂ ಶುಕ್ರವಾರದಂದು ನಮ್ಮ ಮಸೀದಿ ತುಂಬಲು ಎರಡನೇ ಖುತುಬ ತನಕ ಕಾಯಬೇಕಾದುದು ಏಕೆ? ಜುಮುಅಃ ನಮಾಝನ್ನು ಅದರ ಪೂರ್ಣ ಪ್ರತಿಫಲವನ್ನು ಪಡೆದು ನಿರ್ವಹಿಸಲು ಅಸಾಧ್ಯವಾದುದರ ಹಿನ್ನೆಲೆಯಲ್ಲಿರುವ ಕಾರಣವೇನು?

ಕಾರಣ ಕೇಳಿದರೆ ಹಲವಾರು ಉತ್ತರಗಳಿರಬಹುದು. ಅಂಗಡಿಯ ಸಾಮಾನುಗಳನ್ನೆಲ್ಲ ಜೋಪಾನವಾಗಿ ಜೋಡಿಸದೆ ಚೆಲ್ಲಾಪಿಲ್ಲಿಯಾಗಿ ಬಿಟ್ಟು ಬರಲು ಸಾಧ್ಯವೇ? ವ್ಯಾಪಾರಿಯ ಕಾರಣ ಹೀಗಿದ್ದರೆ, ಮನೆಯ ಕೆಲಸಗಳನ್ನು ನಿರ್ವಹಿಸಿಕೊಂಡು ಬರುವಾಗ ತಡವಾಗುತ್ತದೆ ಎನ್ನುವುದು ಗೃಹಸ್ಥನ ಸಬೂಬಾಗಿರುತ್ತದೆ. ಹೊಲದಲ್ಲಿ ಕೂತಿರುವುದರಿಂದ ಸಮಯ ಹೋದದ್ದೇ ಗೊತ್ತಾಗಲಿಲ್ಲ ಎನ್ನುವುದು ಕೃಷಿಕನ ಕಾರಣವಾದರೆ, ಕಛೇರಿಯಿಂದ ಬೇಗ ಬರಲು ಮೇಲಧಿಕಾರಿ ಅವಕಾಶ ನೀಡಲಿಲ್ಲವೆಂದು ನೌಕರನು ಕಾರಣ ಮುಂದಿಡುತ್ತಾನೆ.

ಅಷ್ಟೇಕೆ, ಪೇಟೆಯಲ್ಲಿ ಸುಮ್ಮನೆ ಅಲೆದಾಡಿ ಕಾಲ ತಳ್ಳುವವರಿಗೆ ಕೂಡಾ ಅವರದ್ದೇ ಆದ ಕಾರಣಗಳಿರುತ್ತವೆ. ಆದರೆ ಈ ಕಾರಣವನ್ನು ಯಾರು ಕೇಳುತ್ತಾರೆ? ತಡವಾಗಿ ಆಗಮಿಸುವವರ ಕಾರ್ಯದಲ್ಲಿ ಪ್ರಶ್ನಿಸಲು ಖತೀಬರುಗಳು ಖಲೀಫ ಉಮರ್(ﷺ) ರವರನ್ನು ಆದರ್ಶವನ್ನಾಗಿ ಮಾಡಿಕೊಳ್ಳುವುದಿಲ್ಲ. ಅವರು ಹಾಗೆ ಮಾಡುತ್ತಿದ್ದರೆ, ಉಸ್ಮಾನ್(ﷺ) ರಂತೆ ಸ್ಪಷ್ಟವಾದ ಕಾರಣಗಳ ಸಮಜಾಯಿಷಿಕೆ

ನೀಡಲು ಯಾರಿಗೆ ಸಾಧ್ಯವಿತ್ತು? ಕಾರಣ ಹೇಳುವ ಅದೆಷ್ಟು ಮಂದಿ ಮುಂದಿನ ಜುಮುಅಕ್ಕೆ ಅದೇ ಮಸೀದಿಗೆ ಬರುತ್ತಾರೆ?

ಜನರ ಮಧ್ಯೆ ತನ್ನನ್ನು ಅವಮಾನಗೊಳಿಸಲಾಯಿತು ಎಂಬ ಆರೋಪದೊಂದಿಗೆ ಸಭೆಯನ್ನು ತೊರೆಯದವರು ವಿರಳ. ಅಥವಾ ಖತೀಬರುಗಳು ಉಮರ್(ؓ) ತೋರಿಸಿದ ಧೈರ್ಯವನ್ನು ತೋರಿಸಿದರೆ ಉಸ್ಮಾನ್(ؓ) ರಿಗೆ ಉಂಟಾಗದ ಅಪಮಾನಪ್ರಜ್ಞೆ ನಮ್ಮಲ್ಲುಂಟಾಗಬಹುದು. ನಮ್ಮಲ್ಲಿ ಕೆಲವರ ಆಸಕ್ತಿ ವಿಜಯದೆಡೆಗೆ ಧಾವಿಸುವುದರ ಬದಲಾಗಿ ಅದರಿಂದ ವಿಮುಖರಾಗುವುದರಲ್ಲಿದೆ.

ಅಶ್ರದ್ಧೆ ಮತ್ತು ಆಲಸ್ಯ ಪೈಶಾಚಿಕ ಪ್ರೇರಣೆಯಾಗಿದೆಯೆಂದು ನಮಗೆ ಗೊತ್ತಿಲ್ಲದ ಸಂಗತಿಯಲ್ಲ. ಆದರೆ ನಮ್ಮಲ್ಲಿ ಹಲವರು ಅದರ ದಾಸರಾಗಿದ್ದಾರೆ. ಈ ಪೈಶಾಚಿಕ ಪ್ರೇರಣೆಯಿಂದ ವೈಯುಕ್ತಿಕ ಅಥವಾ ಭೌತಿಕ ಕಾರ್ಯಗಳನ್ನು ಮೊಟಕುಗೊಳಿಸುವುದಕ್ಕಿಂತ ಧಾರ್ಮಿಕ ಕಾರ್ಯಗಳನ್ನು ಮೊಟಕುಗೊಳಿಸುವುದು ಹತ್ತುಪಟ್ಟು ಗುರುತರವಾಗಿದೆ. ನಮಾಝ್‌ನಂತಹ ಆರಾಧನೆಗಳನ್ನು ಮರೆಯುವುದು, ಮೊಟಕುಗೊಳಿಸುವುದು ಅಥವಾ ಮುಂದೂಡುವುದಕ್ಕೆ ವ್ಯಾಪಾರ, ಮನೋರಂಜನೆ, ಕೆಲಸದ ಕಾರಣಗಳನ್ನು ಹೇಳುವುದು ಅಲ್ಲಾಹನೊಂದಿಗೆ ತೋರ್ಪಡಿಸುವ ಕೃತಘ್ನತೆಯಾಗಿದೆ.

ಏಕೆಂದರೆ ಈ ಲೋಕದಲ್ಲಿರುವ ಸುಖ ಸೌಕರ್ಯಗಳು ಅಲ್ಲಾಹನ ಅನುಗ್ರಹಗಳಾಗಿವೆ. ಆರಾಧನೆಗಳನ್ನು ಕ್ಲಪ್ತವಾಗಿ ನಿರ್ವಹಿಸುವ ಮೂಲಕ ಅನುಗ್ರಹಗಳಿಗೆ ಕೃತಜ್ಞತೆ ತೋರಿಸಬೇಕು. ಅನುಗ್ರಹಗಳನ್ನು ಅನುಭವಿಸುವ ಭರದಲ್ಲಿ ಆರಾಧನೆಯಲ್ಲಿ ಅಶ್ರದ್ಧರಾಗುವುದು ಕೃತಜ್ಞತೆಯಲ್ಲ, ಕೃತಘ್ನತೆಯಾಗಿದೆ.

ನಮಾಝ್ ನಿರ್ವಹಿಸಿದ ನಂತರ ವ್ಯಾಪಾರ-ವಹಿವಾಟುಗಳಲ್ಲಿ ನಿರತಾಗಬೇಕೆಂದು ಕುರ್‌ಆನ್ ಹೇಳಿದೆ (ಜುಮುಅಃ 10). ಒಮ್ಮೆ ಪ್ರವಾದಿ(ﷺ)ಯವರು ಮದೀನಾ ಮಸೀದಿಯಲ್ಲಿ ಖುತುಬಃ ನಿರ್ವಹಿಸುತ್ತಿರುವಾಗ ಸಹಾಬಿಗಳು ಅವರನ್ನು ಬಿಟ್ಟುಬಿಟ್ಟು ಮದೀನಾದಲ್ಲಿದ್ದ ವ್ಯಾಪಾರಿ ತಂಡದೆಡೆಗೆ ತೆರಳಿದ ಘಟನೆ ಪ್ರಸಿದ್ಧವಾಗಿದೆ.

ವ್ಯಾಪಾರಿ ವಸ್ತುಗಳು ಮುಗಿದುಹೋಗುತ್ತದೋ ಎಂಬ ಆಶಂಕೆ ಹಾಗೂ ನಮಾಝ್ ಆರಂಭವಾಗುವಾಗ ಮಸೀದಿಗೆ ಬರಬಹುದು ಎಂಬ ಲೆಕ್ಕಾಚಾರ ಸಹಾಬಿಗಳನ್ನು ಇದಕ್ಕೆ ಪ್ರೇರೇಪಿಸಿತ್ತು. ಆದರೆ ಅನುಚರರು ಮಾಡಿದ ಎಡವಟ್ಟು ಪ್ರವಾದಿ(ﷺ) ಯವರನ್ನು ನೋಯಿಸಿತು. ಅವರು ತಮ್ಮ ಮನಸ್ಸುಗಳನ್ನು ಮಸೀದಿಯ ಆರಾಧನೆಯಿಂದ ಮಾರುಕಟ್ಟೆಯ ಗೌಜಿಗದ್ದಲದೆಡೆಗೆ ತಿರುಗಿಸಿದ ತಪ್ಪನ್ನು ಅಲ್ಲಾಹು ತಿದ್ದಿದ.

"ಅವರು ವ್ಯಾಪಾರ ಮತ್ತು ಮನರಂಜನೆ ನಡೆಯುತ್ತಿರುವುದನ್ನು ಕಂಡೊಡನೆ ಅದರೆಡೆಗೆ ಧಾವಿಸಿಹೋದರು ಮತ್ತು ನಿಮ್ಮನ್ನು ನಿಂತಲ್ಲೇ ಬಿಟ್ಟುಬಿಟ್ಟರು. ಇವರೊಡನೆ ಹೇಳಿರಿ: ಅಲ್ಲಾಹನ ಬಳಿ ಏನಿದೆಯೋ ಅದು ವ್ಯಾಪಾರ ಮತ್ತು ಮನರಂಜನೆಗಿಂತ ಉತ್ತಮವಾಗಿದೆ ಮತ್ತು ಅಲ್ಲಾಹನು ಅತ್ಯುತ್ತಮ ಅನ್ನದಾತನಾಗಿದ್ದಾನೆ." (ಜುಮುಅಃ 11)

ಅಲ್ಲಾಹನು ಸಹಾಬಿಗಳನ್ನು ತಿದ್ದಿದ. ನಮ್ಮನ್ನು ತಿದ್ದಲು ಮಾತ್ರ ಅಲ್ಲಾಹನ ವಚನಗಳಿಗೆ ಶಕ್ತಿಯಿಲ್ಲವೇ? ಅಥವಾ ಅಲ್ಲಾಹನ ಬಳಿಯಲ್ಲಿರುವುದು ಉತ್ತಮವಲ್ಲ ಎನ್ನುವುದು ನಮ್ಮ ಅಭಿಪ್ರಾಯವೇ? ■

*37 ನೇ ಪುಟದಿಂದ*

## ಇಮಾಮ್ ಶಾಫಿಈಯವರ ಅಮೃತವಾಣಿ

ಹೇಳುವವನು ಸುಳ್ಳುಗಾರನು. ಎರಡನ್ನು ಒಂದೇ ರೀತಿಯಲ್ಲಿ ಪ್ರೀತಿಸಲು ಸಾಧ್ಯವಿಲ್ಲ."

**********

"ಎಂಟು ಮಂದಿ ಎಂಟು ಅಗತ್ಯಗಳೊಂದಿಗೆ ಸದಾ ನನ್ನನ್ನು ಸುತ್ತುವರಿದಿರುತ್ತಾರೆ. ಅಲ್ಲಾಹನ ಗ್ರಂಥ: ಅದರ ಪ್ರಕಾರ ಜೀವಿಸಲು. ಪ್ರವಾದಿಚರ್ಯೆ: ಅದನ್ನು ಅನುಸರಿಸಲು. ಸೈತಾನ: ಅಲ್ಲಾಹನನ್ನು ಧಿಕ್ಕರಿಸುವಂತೆ ಮಾಡಲು. ನನ್ನ ಕುಟುಂಬ: ಆಹಾರ ಸಂಪಾದಿಸಲು. ನನ್ನ ದೇಹ: ಕೆಲವು ಆಸೆಗಳೊಂದಿಗೆ, ಕಾಲ: ಹಲವಾರು ಬೇಡಿಕೆಗಳೊಂದಿಗೆ. ಮಲಕ್: ನನ್ನ ಆತ್ಮವನ್ನು ವಶಪಡಿಸಿಕೊಳ್ಳಲು."

**********

"ನಾನು ನನ್ನ ಜೀವನದಲ್ಲಿ ಮೂರು ಬಾರಿ ಬಡತನಕ್ಕೆ ಸಿಲುಕಿದ್ದೆ. ಅಂದು ಎಲ್ಲವನ್ನೂ ಕಿತ್ತು ಮಾರಾಟ ಮಾಡಿದೆ. ಪತ್ನಿ ಮತ್ತು ಮಕ್ಕಳ ಆಭರಣಗಳನ್ನು ಕೂಡಾ. ಆದರೆ ಅವುಗಳಾವುದನ್ನೂ ನಾನು ಒಮ್ಮೆಯೂ ಅಡವಿಗೆ ಇಟ್ಟಿರಲಿಲ್ಲ."

**********

"ನಾನು ಹೊಟ್ಟೆ ತುಂಬಾ ಉಂಡು 16 ವರ್ಷ ಕಳೆದಿದೆ. ಹೊಟ್ಟೆ ತುಂಬಿದರೆ ಹಲವು ದೋಷಗಳಿವೆ. ಭಾರ ಹೆಚ್ಚಾಗುತ್ತದೆ. ಮನಸ್ಸು ಹಾಳಾಗುತ್ತದೆ. ಬುದ್ಧಿ ಕಡಿಮೆಯಾಗುತ್ತದೆ. ನಿದ್ರೆ ಬರುತ್ತದೆ. ಆರಾಧನೆಯಲ್ಲಿ ಆಸಕ್ತಿ ಕಡಿಮೆಯಾಗುತ್ತದೆ." ■

# ಅಂಧವಿಶ್ವಾಸಗಳು ಅಂತ್ಯವಾಗುವುದಿಲ್ಲ

ಸುನ್ನತ್ ಜಮಾಅತ್ ಗುತ್ತಿಗೆ ಹಿಡಿದುಕೊಂಡಿದ್ದೇವೆ ಎಂದು ವಾದಿಸುವ ಸಮಸ್ತದವರ ವಿಶ್ವಾಸ ಕೂಡಾ ಹೀಗೆಯೇ ಇದೆ. ಆದುದರಿಂದಲೇ ಇಂತಹ ಅಂಧವಿಶ್ವಾಸಿಗಳು ಬದ್ರ್ ಹುತಾತ್ಮರಿಂದ ಹಿಡಿದು ಉಪ್ಪಾಪರ ತನಕವಿರುವ ಜನರನ್ನು ಕರೆದು ಪ್ರಾರ್ಥಿಸುತ್ತಿದ್ದಾರೆ. ಹೀಗೆ ಕರೆದು ಪ್ರಾರ್ಥಿಸವವರಲ್ಲಿ ಹಲವರು ಮಹಾತ್ಮರಾಗಿರಬೇಕಿಲ್ಲ. ಕೆಲವರು ಅರೆಹುಚ್ಚರೋ ಪೂರ್ಣ ಹುಚ್ಚರೋ ಆಗಿರಬಹುದು. ಬೇರೆ ಕೆಲವರು ಮುಸ್ಲಿಮರು ಕೂಡಾ ಆಗಿರುವುದಿಲ್ಲ. ಆದರೆ ಪ್ರಾರ್ಥನೆ ಅಲ್ಲಾಹನಿಗೆ ಮಾತ್ರ ಸಮರ್ಪಿಸಲ್ಪಡಬೇಕೆಂದು ಅಲ್ಲಾಹ್ ಮತ್ತು ಆತನ ಸಂದೇಶವಾಹಕರು ಕಲಿಸಿಕೊಟ್ಟಿದ್ದರಿಂದ ದುಷ್ಕರ್ಮಿಯೊಂದಿಗೆ ಪ್ರಾರ್ಥಿಸಿದರೂ, ಸತ್ಕರ್ಮಿಯೊಂದಿಗೆ ಪ್ರಾರ್ಥಿಸಿದರೂ ಅವೆಲ್ಲವೂ ಅವರಿಗಿರುವ ಆರಾಧನೆಯಾಗಿರುವುದರಿಂದ ಶಿರ್ಕ್ ಆಗಿದೆ.

ಅಂಧವಿಶ್ವಾಸ ಮತ್ತು ಅನಾಚಾರಗಳು ಸದಾಕಾಲ ನೆಲೆನಿಂತಿದೆ. ಅದು ಕೂಡಾ ಧರ್ಮನಿಷೇಧಿಗಳಲ್ಲಲ್ಲ, ಧರ್ಮವಿಶ್ವಾಸಿಗಳಲ್ಲಿಯೇ ಹೆಚ್ಚು. ಒಬ್ಬ ಪ್ರವಾದಿಯ ಜನಾಂಗವು ಮೇರೆ ಮೀರುವಾಗ ಆ ಜನತೆಯನ್ನು ನಾಶಪಡಿಸಿ ಉಪದೇಶಿಸಿದ ಪ್ರವಾದಿ ಮತ್ತು ಅವರ ಸೀಮಿತ ಅನುಚರರನ್ನು ಅಲ್ಲಾಹನು ರಕ್ಷಿಸುತ್ತಾನೆ. ಇದು ಪವಿತ್ರ ಕುರ್‌ಆನ್ ಹಲವೆಡೆಗಳಲ್ಲಿ ನಮಗೆ ನೀಡಿದ ಪಾಠವಾಗಿದೆ. ಅನಂತರ ಪಥಭ್ರಷ್ಟರಾಗುವುದು ಅಲ್ಲಾಹನು ರಕ್ಷಿಸಿದ ಮೇಲೆ ಹೇಳಿದ ಪ್ರವಾದಿಗಳ ಅನುಯಾಯಿಗಳೇ ಆಗಿದ್ದಾರೆ. ಆಗ ಅವರನ್ನು ಸನ್ಮಾರ್ಗಕ್ಕೆ ತರಲು ಅಲ್ಲಾಹನು ಮತ್ತೋರ್ವ ಪ್ರವಾದಿಯನ್ನು ನಿಯೋಗಿಸುತ್ತಾನೆ. ಪ್ರಸ್ತುತ ಪ್ರವಾದಿ ಆಗತರಾಗುವಾಗ ಸಮಾಜದಲ್ಲಿ ಅಂಧವಿಶ್ವಾಸ ಮತ್ತು ಅನಾಚಾರಗಳು ಪ್ರಬಲವಾಗಿ ನೆಲೆನಿಂತಿರುವ ಅವಸ್ಥೆ ಇರುತ್ತದೆ. ಪವಿತ್ರ ಕುರ್‌ಆನ್ ಮತ್ತು ಸುನ್ನತ್ತನ್ನು ಪರಿಶೋಧಿಸುವಾಗ ನಮಗೆ ಈ ಕಾರ್ಯವು ಸ್ಪಷ್ಟವಾಗುತ್ತದೆ.

ಪ್ರವಾದಿ ನೂಹ್(ﷺ) ರನ್ನು ಅಲ್ಲಾಹನು ಸಂದೇಶವಾಹಕರಾಗಿ ನಿಯೋಗಿಸಿದಾಗ ಅವರ ಜನಾಂಗ ಅಲ್ಲಾಹನನ್ನು ಬಿಟ್ಟು ವದ್ದ್, ಸುವಾಅ್, ಯಊಖ್, ನಸ್ರ್ ಮೊದಲಾದ ಹೆಸರುಗಳಲ್ಲಿ ಗುರುತಿಸಲ್ಪಡುತ್ತಿದ್ದ ಮಹಾತ್ಮರನ್ನು ಕರೆದು ಪ್ರಾರ್ಥಿಸಿ ಅವರನ್ನು ಆರಾಧಿಸುತ್ತಿದ್ದ ಪರಿಸ್ಥಿತಿ ಇತ್ತು. ಅವರನ್ನು ಅದರಿಂದ ಮುಕ್ತಗೊಳಿಸಿ ಅಲ್ಲಾಹನನ್ನು ಮಾತ್ರ ಕರೆದು ಪ್ರಾರ್ಥಿಸಲು ಮತ್ತು ಅವನನ್ನು ಮಾತ್ರ ಆರಾಧಿಸಲು ತಮ್ಮ ಜನತೆಗೆ ಕಲಿಸಿಕೊಡಲು ಅಲ್ಲಾಹನು ಪ್ರವಾದಿ ನೂಹ್(ﷺ) ರನ್ನು ಪ್ರವಾದಿಯಾಗಿ ಕಳುಹಿಸಿಕೊಟ್ಟನು. ಈ ವಿಷಯವನ್ನು ಅಲ್ಲಾಹನು ಸೂರತ್ ನೂಹ್‌ನಲ್ಲಿ ವಿವರಿಸಿಕೊಟ್ಟಿದ್ದಾನೆ. ನೂಹ್(ﷺ) ರ ಜನತೆ ಪ್ರಾರ್ಥಿಸುತ್ತಿದ್ದುದು ಕೇವಲ ಕಲ್ಲುಗಳೊಂದಿಗಾಗಿರಲಿಲ್ಲ. ಬದಲಾಗಿ ಮೃತರಾದ ಮಹಾತ್ಮರನ್ನಾಗಿತ್ತು. ಇಮಾಮ್ ಬುಖಾರಿ(ﷺ) ದಾಖಲಿಸುತ್ತಾರೆ:

"ಇವುಗಳು (ವದ್ದ್, ಸುವಾಅ್ ಇತ್ಯಾದಿ) ಪ್ರವಾದಿ ನೂಹ್(ﷺ) ರ ಜನಾಂಗಕ್ಕೆ ಒಳಪಟ್ಟ ಸಜ್ಜನರ ಹೆಸರುಗಳಾಗಿವೆ." (ಬುಖಾರಿ--ಫತ್‌ಹುಲ್ ಬಾರಿ 11/71) ಪೂರ್ವಿಕ ವಿದ್ವಾಂಸರ ಮಾತುಗಳನ್ನು ಆಧಾರವಾಗಿಟ್ಟುಕೊಂಡು ಇಬ್ನ್ ಹಜರ್(ﷺ) ಬರೆಯತ್ತಾರೆ:

"ಪ್ರವಾದಿ ಆದಮ್(ﷺ) ರಿಗೆ ಐದು ಮಂದಿ ಮಕ್ಕಳಿದ್ದರು. ಮೇಲಿನ ಹೆಸರುಗಳಲ್ಲಿ ಗುರುತಿಸಲ್ಪಡುವವರು ಅವರೇ ಆಗಿದ್ದರು. ಅವರು ಭಕ್ತರಾಗಿದ್ದರು." (ಫತ್‌ಹುಲ್ ಬಾರಿ 11/73) ಮೇಲೆ ಹೇಳಲಾದ ಮಹಾತ್ಮರುಗಳಿಗೆ ನೂಹ್(ﷺ) ರ ಜನತೆ ಯಾವ ರೀತಿಯಲ್ಲಿ

ಆರಾಧನೆಗಳನ್ನು ಅರ್ಪಿಸುತ್ತಿದ್ದರು? ಇಬ್ನ್ ಹಜರ್(ﷺ) ಹೇಳುತ್ತಾರೆ:

"ಅವರೊಂದಿಗೆ ಪ್ರಾರ್ಥನೆ ನಡೆಸುವ ಮೂಲಕ ಅವರು ಅನುಗ್ರಹವನ್ನು ಯಾಚಿಸುತ್ತಿದ್ದರು." (ಫತ್‌ಹುಲ್ ಬಾರಿ 11/73). ಅವರನ್ನು ಕರೆದು ಪ್ರಾರ್ಥಿಸಿದರೆ ಮಾತ್ರ ಅನುಗ್ರಹ ಲಭಿಸುತ್ತದೆ ಎನ್ನುವುದು ಅವರ ವಿಶ್ವಾಸವಾಗಿತ್ತು. ಅಲ್ಲಾಹನೊಂದಿಗಿನ ನೇರವಾದ ಪ್ರಾರ್ಥನೆಯನ್ನು ಅವರು ಪರಿಗಣಿಸುತ್ತಿರಲಿಲ್ಲ.

ಸುನ್ನತ್ ಜಮಾಅತ್ ಗುತ್ತಿಗೆ ಹಿಡಿದುಕೊಂಡಿದ್ದೇವೆ ಎಂದು ವಾದಿಸುವ ಸಮಸ್ತದವರ ವಿಶ್ವಾಸ ಕೂಡಾ ಹೀಗೆಯೇ ಇದೆ. ಆದುದರಿಂದಲೇ ಇಂತಹ ಅಂಧವಿಶ್ವಾಸಿಗಳು ಬದ್ರ್ ಹುತಾತ್ಮರಿಂದ ಹಿಡಿದು ಉಪ್ಪಾಪರ ತನಕವಿರುವ ಜನರನ್ನು ಕರೆದು ಪ್ರಾರ್ಥಿಸುತ್ತಿದ್ದಾರೆ. ಹೀಗೆ ಕರೆದು ಪ್ರಾರ್ಥಿಸುವವರಲ್ಲಿ ಹಲವರು ಮಹಾತ್ಮರಾಗಿರಬೇಕಿಲ್ಲ.

ಕೆಲವರು ಅರೆಹುಚ್ಚರೋ ಪೂರ್ಣ ಹುಚ್ಚರೋ ಆಗಿರಬಹುದು. ಬೇರೆ ಕೆಲವರು ಮುಸ್ಲಿಮರು ಕೂಡಾ ಆಗಿರುವುದಿಲ್ಲ. ಆದರೆ ಪ್ರಾರ್ಥನೆ ಅಲ್ಲಾಹನಿಗೆ ಮಾತ್ರ ಸಮರ್ಪಿಸಲ್ಪಡಬೇಕೆಂದು ಅಲ್ಲಾಹ್ ಮತ್ತು ಆತನ ಸಂದೇಶವಾಹಕರು ಕಲಿಸಿಕೊಟ್ಟಿದ್ದರಿಂದ ದುಷ್ಕರ್ಮಿಯೊಂದಿಗೆ ಪ್ರಾರ್ಥಿಸಿದರೂ, ಸತ್ಕರ್ಮಿಯೊಂದಿಗೆ ಪ್ರಾರ್ಥಿಸಿದರೂ ಅವೆಲ್ಲವೂ ಅವರಿಗಿರುವ ಆರಾಧನೆಯಾಗಿರುವುದರಿಂದ ಶಿರ್ಕ್ ಆಗಿದೆ.

ಒಬ್ಬ ವ್ಯಕ್ತಿ ಅಥವಾ ವಸ್ತುವಿನಿಂದ ಬೇರೆಯವರಿಗೆ ದೋಷವುಂಟಾಗುತ್ತದೆ ಎಂಬ ಮತ್ತೊಂದು ಅಂಧವಿಶ್ವಾಸ ಪೂರ್ವಿಕರಲ್ಲಿ ನೆಲೆನಿಂತಿತ್ತು. ಈ ದೋಷಬಾಧೆಯು ಅದೃಶ್ಯ ಮತ್ತು ಅಭೌತಿಕವಾದ ನೆಲೆಯಲ್ಲಿ ಕಾರ್ಯಕಾರಣ ಸಂಬಂಧಗಳಿಗೆ ಅತೀತವಾಗಿ ಬೇರೆಯೊಬ್ಬರಿಗೆ ತಟ್ಟುತ್ತದೆ! ಪ್ರವಾದಿ ಹೂದ್(ﷺ) ರ ಜನತೆ ಅವರೊಂದಿಗೆ ಹೀಗೆ ಹೇಳಿದ್ದರೆಂದು ಕುರ್‌ಆನ್ ವಿವರಿಸುತ್ತದೆ.

﴿إِن نَّقُولُ إِلَّا اعْتَرَاكَ بَعْضُ آلِهَتِنَا بِسُوءٍ ۗ قَالَ إِنِّي أُشْهِدُ اللَّهَ وَاشْهَدُوا أَنِّي بَرِيءٌ مِّمَّا تُشْرِكُونَ ﴿٥٤﴾﴾

"ನಿಮ್ಮ ಮೇಲೆ ನಮ್ಮ ಆರಾಧ್ಯರುಗಳ ಪೈಕಿ ಯಾರದ್ದೋ ಶಾಪ ಬಿದ್ದಿದೆಯೆಂದು ನಾವು ತಿಳಿಯುತ್ತೇವೆ." ಹೂದ್ ಹೇಳಿದರು: "ನಾನು ಅಲ್ಲಾಹನ ಸಾಕ್ಷ್ಯವನ್ನು ಮುಂದಿರಿಸುತ್ತೇನೆ. ನೀವು ಅಲ್ಲಾಹನ ಹೊರತು ದೇವತ್ವದಲ್ಲಿ ಭಾಗೀದಾರರನ್ನಾಗಿರಿಸಿಕೊಂಡಿರುವ ಇತರರಿಂದ ನಾನು ಮುಕ್ತನಾಗಿದ್ದೇನೆಂಬ ಬಗ್ಗೆ ನೀವು ಸಾಕ್ಷಿಯಾಗಿರಿ." (ಹೂದ್ 54)

ವಿಗ್ರಹಾರಾಧನೆ ಸರಿಯಲ್ಲವೆಂದು ಆ ಕಾಲದ ಬಹುದೇವವಿಶ್ವಾಸಿಗಳೊಂದಿಗೆ ಹೂದ್(ﷺ) ರು ಹೇಳಿದಾಗ ಆ ಜನತೆ ನೀಡಿದ ಉತ್ತರ ಮೇಲಿನ ಸೂಕ್ತದಲ್ಲಿದೆ. ಅಂದರೆ ಹೂದ್(ﷺ) ರು ವಿಗ್ರಹಾರಾಧನೆಯನ್ನು ವಿರೋಧಿಸುವುದು ಅವರ ಮೇಲೆ ಯಾವುದೋ ವಿಗ್ರಹದ ಶಾಪ ತಟ್ಟಿದ ಕಾರಣದಿಂದಾಗಿತ್ತು!

ಸೂಕ್ತದ ಉಳಿದ ಭಾಗ ಅಂತಹ ವಾದ ಅಲ್ಲಾಹನಿಗೆ ಭಾಗೀದಾರರನ್ನು ನಿಶ್ಚಯಿಸುವುದಾಗಿದೆ ಎಂದು ನಮಗೆ ಕಲಿಸಿಕೊಡುತ್ತದೆ. ಮೃತಪಟ್ಟ ಮಹಾತ್ಮರುಗಳಿಗೆ ಒಳಿತು-ಕೆಡುಕುಗಳನ್ನು ಉಂಟುಮಾಡುವ ಸಾಮರ್ಥ್ಯವಿದೆ ಎಂದು ಮುಶ್ರಿಕರು ನಂಬುತ್ತಿದ್ದುದರಿಂದ ಕುರ್‌ಆನ್ ಅಂತಹ ವಿಶ್ವಾಸ ಶಿರ್ಕ್ ಎಂದು ದಾಖಲಿಸಿತು. ಏಕೆಂದರೆ ಒಳಿತು-ಕೆಡುಕುಗಳನ್ನು ನಿರ್ಧರಿಸುವವನು ಅಲ್ಲಾಹ್ ಮಾತ್ರ. ಅದು ಈಮಾನಿನ ಭಾಗವಾಗಿದೆ.

ಅದೃಶ್ಯವಾದ ನೆಲೆಯಲ್ಲಿ ಸೃಷ್ಟಿಗಳಿಗೆ ಒಳಿತು ಅಥವಾ ಕೆಡುಕನ್ನು ಉಂಟುಮಾಡುವ ಸಾಮರ್ಥ್ಯ ಅಲ್ಲಾಹನಿಗೆ ಮಾತ್ರವಿದೆ ಎನ್ನುವುದು ಇಸ್ಲಾಮಿನ ವಿಶ್ವಾಸವಾಗಿದೆ. ಆದರೆ ಪ್ರತಿಯೊಂದು ಕಾಲಘಟ್ಟದ ಅಂಧವಿಶ್ವಾಸಿಗಳು ಹೂದ್(ﷺ) ರ ನಂಬಿಕೆಯನ್ನಿರಿಸಿಕೊಂಡಿದ್ದರು. ಮುಹ್ಯುದ್ದೀನ್ ಮಾಲೆಯಲ್ಲಿರುವ ಒಂದು ಚರಣವನ್ನು ನೋಡಿರಿ:

ಇದಿನೆ ಒರುತ್ತನ್ ಪೊಯ್ಯೆನ್ನ್

ಚೊಲ್ಲುಂಗಿಲ್

ಅಪ್ಪೋಳೆ ಕೊಲ್ಲುನ್ನ ನಂಞೆ

ಇಾನೆನ್ನೋವರ್

ಮುಹ್ಯುದ್ದೀನ್ ಮಾಲೆಯಲ್ಲಿ ಬಂದಿರುವ ಯಾವುದಾದರೊಂದು ಕಾರ್ಯವನ್ನು ಯಾರಾದರೂ ವಾಸ್ತವವಿರುದ್ಧವೆಂದು ಹೇಳಿದರೆ ಆಗ ಶೈಖ್‌ರು ಅದೃಶ್ಯವಾದ ನೆಲೆಯಲ್ಲಿ ಆ ವ್ಯಕ್ತಿಯನ್ನು ಕೊಂದುಬಿಡುತ್ತಾರಂತೆ! ಮೃತಹೊಂದಿದ ಶೈಖ್ ಏನಿದ್ದರೂ ಇಹಲೋಕಕ್ಕೆ ಬಂದು ಅವರನ್ನು ಕೊಲ್ಲುವ ಪ್ರಶ್ನೆಯಿಲ್ಲ. ಹೀಗಿರುವಾಗ ಮೇಲಿನ ಪದ್ಯದ ಆಶಯ ಹೀಗಿದೆ: ಮಾಲೆಯನ್ನು ಯಾರಾದರೂ ಸುಳ್ಳೆಂದು ಹೇಳಿದರೆ ಅವರಿಗೆ ಶೈಖ್‌ರ ಶಾಪ ತಟ್ಟಿ ತಕ್ಷಣ ಕೊಲ್ಲಲ್ಪಡುತ್ತಾರೆ.

ಲಕ್ಷಣ ನೋಡುವುದು ಅಂಧವಿಶ್ವಾಸದ ಮತ್ತೊಂದು ಪ್ರವಣತೆಯಾಗಿದೆ. ಕೆಲವು ವಸ್ತುಗಳು, ಮತ್ತು ಸೃಷ್ಟಿಗಳ ಸಹಾಯ, ಶಬ್ದ,

ಸಾನಿಧ್ಯವನ್ನು ಆಧಾರವಾಗಿಟ್ಟುಕೊಂಡು ಜೀವನದಲ್ಲಿ ಒಳಿತು-ಕೆಡುಕುಗಳನ್ನು ನಿರ್ಣಯಿಸುವುದಕ್ಕೆ ಲಕ್ಷಣ ನೋಡುವುದು ಅಥವಾ ಶಕುನ ನೋಡುವುದು ಎನ್ನಲಾಗುತ್ತದೆ.

ಹಲ್ಲಿ, ಕಪ್ಪೆ, ಗೂಬೆ, ಕಾಗೆ ಮೊದಲಾದ ಜೀವಿಗಳ ಧ್ವನಿಯನ್ನು ಆಧಾರವಾಗಿಟ್ಟುಕೊಂಡು ಕಾರ್ಯಗಳನ್ನು ನಿರ್ಣಯಿಸುವುದು ಇದರಲ್ಲಿ ಒಳಪಡುತ್ತದೆ. ಹಾಗೆಯೇ ಒಬ್ಬರು ಮನೆಯಿಂದ ಹೊರಟ ಸಂದರ್ಭದಲ್ಲಿ ಕಪ್ಪಗಿನ ನಾಯಿಯೊಂದಿಗೆ ಮುಂದೆ ಓಡಿದರೆ ಅವರು ಇಂದು ಲಕ್ಷಣ ಸರಿಯಿಲ್ಲವೆಂದು ಹೇಳಿ ಹೋಗಲಿಚ್ಛಿಸಿದ ಕಾರ್ಯದಿಂದ ವಿಮುಖರಾಗಿ ಮನೆಗೆ ಹಿಂತಿರುಗುವವರು ಧಾರಾಳವಿದ್ದಾರೆ.

ಅಂತೆಯೇ ಯಾವುದೋ ಒಬ್ಬ ವ್ಯಕ್ತಿಯ ಆಗಮನ ಅಥವಾ ಅವನ ಪ್ರವೃತ್ತನೆಯಿಂದ ಊರಿನಲ್ಲಿ ಬರ್ಕತ್ ಇಲ್ಲದಂತಾಗಿದೆ ಎಂಬ ವಿಶ್ವಾಸ ಮತ್ತು ವಾದ ಶಿರ್ಕ್‌ನ ಆಚಾರವಾಗಿದೆ.

ಪ್ರವಾದಿ(ﷺ) ಯವರ ಪುತ್ರ ಇಬ್ರಾಹೀಮ್ ಮರಣಹೊಂದಿದಾಗ ಆ ದಿನ ಸೂರ್ಯಗ್ರಹಣ ಸಂಭವಿಸಿತ್ತು. ಕೆಲವು ಸ್ವಹಾಬಿಗಳು ಪ್ರವಾದಿ (ﷺ) ಯವರ ಪುತ್ರ ಮರಣಹೊಂದಿದ್ದರಿಂದಲೇ ಗ್ರಹಣ ಸಂಭವಿಸಿದೆಯೆಂದು ಹೇಳಿದಾಗ ಪ್ರವಾದಿ(ﷺ) ಯವರು ಅವರ ಅಂಧವಿಶ್ವಾಸವನ್ನು ತಿದ್ದಿದರು. ಇಮಾಮ್ ಬುಖಾರಿ(ؒ) ಉಲ್ಲೇಖಿಸುತ್ತಾರೆ:

“ಪ್ರವಾದಿ(ﷺ)ಯವರ ಕಾಲದಲ್ಲಿ ಅವರ ಇಬ್ರಾಹೀಮ್ ಎಂಬ ಮಗು ಮೃತಪಟ್ಟ ದಿನ ಸೂರ್ಯಗ್ರಹಣ ಸಂಭವಿಸಿತು. ಆಗ ಜನರು ಹೇಳಿದರು: ಇಬ್ರಾಹೀಮ್ ಮರಣಹೊಂದಿದ ಕಾರಣದಿಂದ ಸೂರ್ಯಗ್ರಹಣ ಸಂಭವಿಸಿದೆ. ಆಗ ಪ್ರವಾದಿ(ﷺ) ಹೀಗೆಂದರು: ಒಬ್ಬರ ಜನನ-ಮರಣದ ಕಾರಣದಿಂದ ಸೂರ್ಯ-ಚಂದ್ರರಿಗೆ ಗ್ರಹಣ ಬಾಧಿಸುವುದಿಲ್ಲ. ನೀವು ಗ್ರಹಣ ಸಂಭವಿಸಿದ್ದನ್ನು ನೋಡಿ ನಮಾಝ್ ನಿರ್ವಹಿಸಿ ಅಲ್ಲಾಹನೊಂದಿಗೆ ಪ್ರಾರ್ಥಿಸಿರಿ.” (ಬುಖಾರಿ)

ಲಕ್ಷಣ ಮತ್ತು ಶಕುನ ನೋಡುವ ಶಿರ್ಕ್‌ನ ಸಂಪ್ರದಾಯ ಹಲವು ಪೂರ್ವಿಕ ಪ್ರವಾದಿಗಳ ಕಾಲಘಟ್ಟದಲ್ಲಿಯೂ ನೆಲೆನಿಂತಿತ್ತೆಂದು ಪವಿತ್ರ ಕುರ್‌ಆನ್‌ನಲ್ಲಿದೆ. ಒಂದು ಪ್ರದೇಶದಲ್ಲಿ ಪ್ರವಾದಿಗಳು ಆಗತರಾದಾಗ ಅಲ್ಲಿಯ ಜನರು ಪ್ರವಾದಿಗಳೊಂದಿಗೆ ಪ್ರತಿಕ್ರಿಯಿಸಿದ ರೀತಿಯನ್ನು ಕುರ್‌ಆನ್ ವಿವರಿಸಿದೆ:

﴿قَالُوٓاْ إِنَّا تَطَيَّرۡنَا بِكُمۡۖ لَئِن لَّمۡ تَنتَهُواْ لَنَرۡجُمَنَّكُمۡ وَلَيَمَسَّنَّكُم مِّنَّا عَذَابٌ أَلِيمٞ ﴿١٨﴾

“ನಾಡಿನವರು ಹೇಳತೊಡಗಿದರು: ನಾವು ನಿಮ್ಮನ್ನು ನಮ್ಮ ಪಾಲಿನ ಅಪಶಕುನವೆಂದು ತಿಳಿಯುತ್ತೇವೆ. ನೀವು ಈ ಕಾರ್ಯವನ್ನು ಕೈಬಿಡದಿದ್ದರೆ ನಾವು ನಿಮ್ಮನ್ನು ಕಲ್ಲೆಸೆದು ಕೊಲ್ಲುವೆವು ಮತ್ತು ನೀವು ನಮ್ಮಿಂದ ವೇದನಾಜನಕ ಶಿಕ್ಷೆ ಪಡೆಯುವಿರಿ.” (36:18)

ಪ್ರವಾದಿ ಮೂಸಾ(عليه السلام) ರೊಂದಿಗೆ ಅವರ ಶತ್ರುಗಳು ಪ್ರತಿಕ್ರಿಯಿಸಿದ ರೂಪವನ್ನು ಅಲ್ಲಾಹನು ವಿವರಿಸುತ್ತಾನೆ:

﴿فَإِذَا جَآءَتۡهُمُ ٱلۡحَسَنَةُ قَالُواْ لَنَا هَٰذِهِۦۖ وَإِن تُصِبۡهُمۡ سَيِّئَةٞ يَطَّيَّرُواْ بِمُوسَىٰ وَمَن مَّعَهُۥٓۗ أَلَآ إِنَّمَا طَٰٓئِرُهُمۡ عِندَ ٱللَّهِ وَلَٰكِنَّ أَكۡثَرَهُمۡ لَا يَعۡلَمُونَ ﴿١٣١﴾

“ಅವರಿಗೆ ಸುದಿನಗಳು ಬಂದಾಗ ಅವರು, ನಾವು ಇದಕ್ಕೇ ಅರ್ಹರಾಗಿದ್ದೆವೆನ್ನುತ್ತಿದ್ದರು. ದುರ್ದಿನಗಳು ಬಂದಾಗ ಮೂಸಾ ಮತ್ತು ಅವರ ಸಂಗಡಿಗರನ್ನು ಅಪಶಕುನವೆನ್ನುತ್ತಿದ್ದರು. ವಸ್ತುತಃ ಅವರ ಅಪಶಕುನವು ಅಲ್ಲಾಹನ ಕೈಯಲ್ಲಿತ್ತು. ಆದರೆ ಅವರಲ್ಲಿ ಹೆಚ್ಚಿನವರು ಅರಿವಿಲ್ಲವರಾಗಿದ್ದರು.” (7:131)

ಲಕ್ಷಣ ನೋಡುವುದು ಹಾಗೂ ಶಕುನ ನೋಡುವುದು ಶಿರ್ಕಾಗಿದೆಯೆಂದು ಪ್ರವಾದಿ(ﷺ) ಯವರು ಮೂರು ಬಾರಿ ಪುನರಾವರ್ತಿಸಿ ಹೇಳಿದ್ದಾರೆ. (ಅಬೂದಾವೂದ್)

ಲಕ್ಷಣ ಮತ್ತು ಶಕುನ ನೋಡುವ ಸಂಪ್ರದಾಯ ಯಹೂದ್ಯರಲ್ಲಿ ವ್ಯಾಪಕವಾಗಿದೆ. ಶಿಯಾಗಳು ಅವರಿಂದ ಈ ಸಂಪ್ರದಾಯವನ್ನು ಸ್ವೀಕರಿಸಿದವರಾಗಿದ್ದಾರೆ. ಶಿಯಾಗಳ ಈ ಸಂಪ್ರದಾಯವನ್ನು ಸುನ್ನಿ ಮುಸ್ಲಿಮರು ಅನುಸರಿಸಿದರು.

ಶಿಯಾಗಳು ಮುಹರ್ರಂ ಹತ್ತನ್ನು ನಹ್ಸ್ (ಕೆಟ್ಟದಿನ) ಮಾಡಿದಾಗ ಸುನ್ನತ್ ಜಮಾತ್‌ನವರು ಒಂದರಿಂದ ಹತ್ತು ದಿನಗಳು ನಹ್ಸ್ ಎಂದು ಸಾರಿಬಿಟ್ಟರು! ಮುಹರ್ರಂ ಅಲ್ಲಾಹನು ಪವಿತ್ರವೆಂದು ಕರೆದ ತಿಂಗಳಲ್ಲಿ ಮೊದಲನೆಯದ್ದಾಗಿದೆ. ಈ ಕಾರ್ಯವನ್ನು ಅಲ್ಲಾಹು ಸೂರತು ತೌಬದಲ್ಲಿ ವಿವರಿಸಿದ್ದಾನೆ. ■

# ಅನ್ನದಾತನಿಗೆ ಕೃತಜ್ಞರಾಗಿರಿ!

ಅನಸ್ ಬಿನ್ ಮಾಲಿಕ್(ﷺ) ಅವರಿಂದ ವರದಿ. ಪ್ರವಾದಿ (ﷺ) ಯವರು ಹೇಳುತ್ತಾರೆ: "ನಿಶ್ಚಯವಾಗಿಯೂ ಅಲ್ಲಾಹನು ಒಬ್ಬ ದಾಸನೊಂದಿಗೆ ಸಂತೃಪ್ತನಾಗಿರುವನು. ಅವನು ಅನ್ನಪಾನೀಯಗಳ ಸೇವನೆಯ ನಂತರ ಅಲ್ಲಾಹನನ್ನು ಸ್ತುತಿಸುತ್ತಾನೆ." (ಬುಖಾರಿ)

ಮನುಷ್ಯನು ಹಸಿವು ಬಾಯಾರಿಕೆಗಳಿರುವ ಒಂದು ಜೀವಿಯಾಗಿದ್ದಾನೆ. ಅತ್ಯುತ್ತಮ ಆಹಾರ ಮತ್ತು ಪಾನೀಯಗಳನ್ನು ಉಪಯೋಗಿಸಲು ಆಸೆಪಡದವರು ಇರಲಿಕ್ಕಿಲ್ಲ. ಬಡವರು ಹಸಿವನ್ನು ನೀಗಿಸಲು ಏನಾದರೂ ಆಹಾರ ಲಭಿಸಿದರೆ ಉತ್ತಮವಿತ್ತೆಂದು ಆಸೆಪಡುತ್ತಿರುವಾಗ ಶ್ರೀಮಂತರು ಹೆಚ್ಚೆಚ್ಚು ರುಚಿಕರವಾಗಿರುವುದನ್ನು ತಿನ್ನಲು ಹಾತೊರೆಯುತ್ತಾರೆ.

ಮನುಷ್ಯನ ಹಸಿವನ್ನು ನಿವಾರಿಸುವ ಮತ್ತು ಅವನ ದೇಹಕ್ಕೆ ಪೋಷಕಾಂಶಗಳನ್ನು ಒದಗಿಸುವ ಧಾನ್ಯಗಳು, ಹಣ್ಣುಹಂಪಲು, ತರಕಾರಿಗಳೆಲ್ಲವನ್ನು ಉತ್ಪಾದಿಸುವವನು ಯಾರು? ಮೇಲ್ಭಾಗದಿಂದ ಶುದ್ಧ ನೀರನ್ನು ವರ್ಷಿಸುತ್ತಿರುವವನು ಯಾರು? ಸಮುದ್ರ ಮತ್ತು ನದಿಗಳ ನಿರ್ಮಾತೃ ಯಾರು? ಬಾವಿಯನ್ನು ತೋಡುವಾಗ ಅದರಲ್ಲಿ ನೀರು ಸಿಗುವಂತೆ ನೀರನ್ನು ತಡೆದಿರಿಸಿದವನು ಯಾರು?

ಮೇಲೆ ವಿವರಿಸಿದ ಯಾವುದರಲ್ಲೂ ಮನುಷ್ಯನಿಗೆ ಯಾವುದೇ ಪಾತ್ರವಿಲ್ಲ. ಸತ್ಯವಿಶ್ವಾಸಿಗಳು ಅದರ ಹಿನ್ನೆಲೆಯಲ್ಲಿ ಸರ್ವಶಕ್ತನೂ ಕರುಣಾನಿಧಿಯೂ ಆದ ಅಲ್ಲಾಹನು ಕಾರ್ಯವೆಸಗುತ್ತಿದ್ದಾನೆಂದು ಹೇಳುವಾಗ ವಿಚಾರವಾದಿಗಳು ಮತ್ತು ನಾಸ್ತಿಕರು ಅದೆಲ್ಲವೂ ಪ್ರಕೃತಿ ನಿಯಮಗಳಾಗಿವೆ ಎಂದು ಹೇಳುತ್ತಾರೆ! ಯೋಜನೆಗಳನ್ನು ಅಳವಡಿಸುವಾಗ ಮತ್ತು ನಿಯಮಗಳನ್ನು ಆವಿಷ್ಕರಿಸುವಾಗ ಬುದ್ಧ ಹಾಗೂ ಚಿಂತನೆಯ ಅಗತ್ಯವಿದೆ. ಪ್ರಕೃತಿ ಹಾಗಿದೆಯೇ? ಯಾವತ್ತೂ ಇಲ್ಲ. ನಾಸ್ತಿಕರ ಪ್ರಕಾರ ಪ್ರಪಂಚದ ಪ್ರವೃತ್ತನೆ ರೀತಿಯೇ ಪ್ರಪಂಚ. ಹಾಗಿದ್ದರೆ ಈ ಕ್ರಮಬದ್ಧವಾದ ಪ್ರವೃತ್ತನೆ ರೀತಿ ಹೇಗೆ ಬಂತು? ಅದು ಯಾವ ಮೆಕಾನಿಸಂನ ಫಲ?

ಪವಿತ್ರ ಕುರ್‌ಆನ್ ಹೇಳುತ್ತದೆ:

﴿أَمَّنْ خَلَقَ ٱلسَّمَٰوَٰتِ وَٱلْأَرْضَ وَأَنزَلَ لَكُم مِّنَ ٱلسَّمَآءِ مَآءً فَأَنۢبَتْنَا بِهِۦ حَدَآئِقَ ذَاتَ بَهْجَةٍ مَّا كَانَ لَكُمْ أَن تُنۢبِتُوا۟ شَجَرَهَآ ۗ أَءِلَٰهٌ مَّعَ ٱللَّهِ ۚ بَلْ هُمْ قَوْمٌ يَعْدِلُونَ ٦٠﴾

"ಆಕಾಶಗಳನ್ನೂ ಭೂಮಿಯನ್ನೂ ಸೃಷ್ಟಿಸಿದವನೂ ನಿಮಗೆ ಆಕಾಶದಿಂದ ನೀರನ್ನು ಸುರಿಸಿದವನೂ ತನ್ಮೂಲಕ ನಿಮ್ಮಿಂದ ಬೆಳೆಸಲು ಸಾಧ್ಯವಿಲ್ಲದ ಮರಗಳಿರುವ ಸುಂದರ ಉದ್ಯಾನಗಳನ್ನು ಬೆಳೆಸಿದವನು ಯಾರು? ಅಲ್ಲಾಹನೊಂದಿಗೆ ಇತರ ದೇವರೂ ಇರುವರೇ? ವಾಸ್ತವದಲ್ಲಿ ಇವರೇ (ಇದೆ ಎನ್ನುವವರು) ನೇರಮಾರ್ಗದಿಂದ ಸರಿದು ನಡೆಯುತ್ತಿದ್ದಾರೆ." (ಕುರ್‌ಆನ್ 27:60)

﴿أَمَّنْ هَٰذَا ٱلَّذِى يَرْزُقُكُمْ إِنْ أَمْسَكَ رِزْقَهُۥ﴾

"ಪರಮ ದಯಾಮಯನು ತನ್ನ ಜೀವನಾಧಾರಗಳನ್ನು ತಡೆ ಹಿಡಿದರೆ ನಿಮಗೆ ಜೀವನಾಧಾರ ನೀಡಬಲ್ಲವನು ಯಾರಿದ್ದಾನೆಂದು ಹೇಳಿರಿ." (67:21)



“ನಿಮ್ಮ ಬಾವಿಗಳ ನೀರು ನೆಲದೊಳಕ್ಕೆ ಇಂಗಿ ಹೋದರೆ, ಆ ನೀರಿನ ಹರಿಯುವ ಚಿಲುಮೆಗಳನ್ನು ನಿಮಗೆ ಪುನಃ ಹೊರತಂದು ಕೊಡುವವರು ಯಾರೆಂದು ನೀವು ಯೋಚಿಸಿದ್ದೀರಾ? ಎಂದು ಇವರೊಡನೆ ಕೇಳಿರಿ.” (67:30)

ಹಸಿವೆಯಲ್ಲಿರುವವರಿಗೆ ಅದರ ಕಠೋರತೆ ಮತ್ತು ಅನ್ನದ ಮಹತ್ವ ತಿಳಿಯುತ್ತದೆ. ಬಾಯಾರಿಕೆಯಿಂದ ತತ್ತರಿಸುವವರಿಗೆ ಬಾಯಾರಿಕೆಯ ವಿವಶತೆ ಮತ್ತು ನೀರಿನ ಅಮೂಲ್ಯತೆ ತಿಳಿಯುತ್ತದೆ. ಹಸಿವು ಮತ್ತು ಬಾಯಾರಿಕೆಯಿಂದ ಬಳಲುವವರಿಗೆ ಯಾರಾದರೂ ಅದನ್ನು ಒದಗಿಸಿದರೆ ಫಲಾನುಭವಿ ವ್ಯಕ್ತಿ ಅವರಿಗೆ ಕೃತಜ್ಞತೆ ಸಲ್ಲಿಸುವುದರಲ್ಲಿ ಸಂಶಯವಿಲ್ಲ.

ಹಲವು ಭೂಗತ ಜಗತ್ತಿನ ವ್ಯಕ್ತಿಗಳು ಬಡವರ ಕಣ್ಮಣಿಗಳಾಗಿ ಮೆರೆಯುತ್ತಿರುವುದು ಅವರ ಹಸಿವೆಯನ್ನು ನಿವಾರಿಸುವ ಕಾರಣದಿಂದಾಗಿದೆ. ತಮಗೆ ಅನ್ನ ನೀಡಿದವರನ್ನು ಆ ಬಡ ವ್ಯಕ್ತಿಗಳು ತಮ್ಮ ಪ್ರಾಣದ ಒತ್ತೆಯಿಟ್ಟಾದರೂ ರಕ್ಷಿಸಲು ಮುಂದಾಗುತ್ತಾರೆ. ಆದರೆ ಇವೆಲ್ಲವನ್ನು ಸಜ್ಜುಗೊಳಿಸಿದ ಸೃಷ್ಟಿಕರ್ತನನ್ನು ಸ್ಮರಿಸಿ ಅವನಿಗೆ ಕೃತಜ್ಞತೆ ಸಲ್ಲಿಸುವವರು ವಿರಳ.

ಇಸ್ಲಾಮ್ ಅನ್ನಪಾನೀಯಗಳನ್ನು ಸೇವಿಸುವಾಗ ಅಲ್ಲಾಹನ ನಾಮವನ್ನು ಉಚ್ಚರಿಸಬೇಕು ಮತ್ತು ಸೇವನೆ ಮುಕ್ತಾಯಗೊಂಡಾಗ ಅವನನ್ನು ಸ್ತುತಿಸಬೇಕೆಂದು ಆದೇಶಿಸಿದೆ. ಆಹಾರ ಮತ್ತು ನೀರನ್ನು ದಯಪಾಲಿಸುವವನು ಅಲ್ಲಾಹನಾಗಿದ್ದಾನೆ. ಅವು ಲಭಿಸದೆ ವಿವಶತೆಯಿಂದ ನರಳುವವರಿದ್ದಾರೆ. ಅವೆಲ್ಲ ಧಾರಾಳವಿದ್ದರೂ ಅನ್ ಸೇವಿಸಲು ಹಾಗೂ ನೀರು ಕುಡಿಯಲು ಸಾಧ್ಯವಾಗದ ಅದೆಷ್ಟೋ ರೋಗಿಗಳಿದ್ದಾರೆ. ಇವೆಲ್ಲವನ್ನು ಸ್ಮರಿಸುವ ಒಬ್ಬ ವ್ಯಕ್ತಿಗೆ ಅಂತಹ ಯಾವುದೇ ಅಡೆತಡೆಗಳಿಲ್ಲದ ಅವಸ್ಥೆಯನ್ನು ದಯಪಾಲಿಸಿದ ಅಲ್ಲಾಹನನ್ನು ಸ್ಮರಿಸದೆ ಆಹಾರ ಸೇವಿಸಲು ಅದು ಹೇಗೆ ಸಾಧ್ಯವಾದೀತು? ನೀರನ್ನು ಕುಡಿಯಬಲ್ಲ? ಹಸಿವೆ ಮತ್ತು ಬಾಯಾರಿಕೆ ನೀಗಿದರೆ ಅವರು ಸೃಷ್ಟಿಕರ್ತನನ್ನು ಸ್ಮರಿಸದಿರುವುದಾದರೂ ಹೇಗೆ? ಸತ್ಯವಿಶ್ವಾಸಿ ಒಂದು ಲೋಟ ನೀರು ಕುಡಿದರೂ ಅಲ್ಲಾಹನನ್ನು ಸ್ತುತಿಸುತ್ತಾನೆ. ಏಕೆಂದರೆ ಅದನ್ನು ದಯಪಾಲಿಸಿದವನು ಅವನಾಗಿರುವನು. ಅದಕ್ಕಾಗಿ ಅವನಿಗೆ ಕೃತಜ್ಞತೆ ಪ್ರಕಟಿಸಬೇಕಾಗಿದೆ. ಹೀಗೆ ಕೃತಜ್ಞತೆ ಪ್ರಕಟಿಸುವವರ ಕುರಿತು ಅಲ್ಲಾಹನು ಸಂತೃಪ್ತನಾಗುತ್ತಾನೆಂದು ಪ್ರವಾದಿ(ﷺ) ಯವರು ಹೇಳಿರುವರು.■

*31 ನೇ ಪುಟದಿಂದ*

## ಬಿದ್‌ಅತ್ ಆದ ಕಾರ್ಯಗಳಲ್ಲಿ ಬೆವರು ಹರಿಸುವುದು

ಬಿದ್‌ಅತ್‌ಗಳ ಒಂದು ದೊಡ್ಡ ಕೇಡೇನೆಂದರೆ ಅದರಿಂದ ನಮ್ಮ ಪ್ರವಾದಿ ಮುಹಮ್ಮದ್(ﷺ) ರ ಪ್ರವಾದಿತ್ವಕ್ಕೆ ಮತ್ತು ಅವರ ಕಾರ್ಯನಿರ್ವಹಣೆಗೆ ಕಳಂಕ ಹತ್ತಿದಂತಾಗುತ್ತದೆ. ವಾಸ್ತವದಲ್ಲಿ ಪ್ರವಾದಿ(ﷺ) ಯವರು ಸಮುದಾಯದ ಕುರಿತು ಅತೀವ ಕಾಳಜಿ ಇರುವವರೂ ಅಪಾರ ದಯಾಳುವೂ ಆಗಿರುತ್ತಾರೆ. ಸಮುದಾದಯ ಕುರಿತು ಹಿತಾಕಾಂಕ್ಷಿಯಾಗಿ ಸಮುದಾಯದ ಇಹ-ಪರ ವಿಜಯದ ಕುರಿತು ಉತ್ಕಟೇಚ್ಛೆ ಅಭಿಲಾಷೆಯಿಂದಲೇ ಅವರು ಜೀವಿಸಿದವರು. ಹಾಗಿರುವಾಗ ಪ್ರತಿಫಲಾರ್ಹವಾದ ನಮಾಝ್‌ಗಳು ಸ್ವರ್ಗಕ್ಕೆ ಅರ್ಹರಾಗಿ ಮಾಡುವಂತಹಾ ಕಾರ್ಯಗಳು ಪ್ರವಾದಿ(ﷺ) ಯವರ ಮೇಲೆ ಪ್ರೀತಿಗೆ ಪ್ರತೀಕವಾದಂತಹಾ ಪ್ರವರ್ತನೆಗಳು ಇನ್ನೂ ಇದೆ. ಆದರೆ ಪ್ರವಾದಿ(ﷺ) ಯವರು ಅದನ್ನು ನಮಗೆ ಕಲಿಸಿಲ್ಲ ಎಂದು ಹೇಳಿದಂತಾಗುತ್ತದೆ!! ಇದು ಪ್ರವಾದಿ(ﷺ) ಯವರ ಮೇಲೆ ಹೊರಿಸುವ ಗಂಭೀರ ಪಾಪವಲ್ಲದೆ ಮತ್ತಿನ್ನೇನು?

ಬಿದ್‌ಅತ್‌ನ ಸಮರ್ಥಕರು ಮಾಡುವ ಪ್ರವರ್ತನೆಯ ಹಿನ್ನೆಲೆಯಲ್ಲಿ ಅಡಗಿರುವ ಮಹಾ ಷಡ್ಯಂತ್ರ ಇದುವೇ ಆಗಿದೆ. ಇದರಿಂದ ಮುಹಮ್ಮದ್(ﷺ) ರವರು ಪ್ರವಾದಿಗಳ ಶ್ರಂಖಲೆಯಲ್ಲಿ ಕಟ್ಟಕಡೆಯವರೆಂಬ ಅಹ್ಲುಸ್ಸುನ್ನತ್ತಿನ ವಿಶ್ವಾಸದ ಬುಡಕ್ಕೂ ಕೊಡಲಿ ಇಟ್ಟಂತಾಗುತ್ತದೆ. ಏಕೆಂದರೆ ಇವರ ಈ ಪ್ರವರ್ತನೆಗಳಿಂದ ಪ್ರವಾದಿ (ﷺ) ಯವರ ನಂತರವೂ ಅಲ್ಲಾಹನ ಸಂತೃಪ್ತಿ ಮತ್ತು ಪುಣ್ಯ ಸಂಪಾದಿಸುವ ಕಾರ್ಯಗಳನ್ನು ಕಲಿಸಿಕೊಡುವ ಇನ್ನೂ ಕೆಲವರು ಅವತರಿಸಿದ್ದಾರೆಂದು ವಿಶ್ವಾಸವಿರಿಸಿದಂತಾಗುತ್ತದೆ. ಒಬ್ಬ ಸತ್ಯವಿಶ್ವಾಸಿಯ ಹೃದಯದಲ್ಲಿ ಇಂತಹಾ ಭಾವನೆ ಉಂಟಾಗಲು ಸಾಧ್ಯವೇ?

ವಿಶ್ವಾಸಕ್ಕೆ ಕನ್ನ ಹಾಕುವ ಸರ್ವ ಬಿದ್‌ಅತ್‌ಗಳಿಂದ ಅಲ್ಲಾಹು ನಮ್ಮನ್ನೂ ನಮ್ಮ ಸಮುದಾಯವನ್ನೂ ಕಾಪಾಡಲಿ. ಆಮೀನ್. ■

# ಸಹಿಷ್ಣುತೆ, ಧರ್ಮ ಮತ್ತು ಜಾತ್ಯಾತೀತತೆ

ಕರುಣೆ ಮತ್ತು ಸೌಮ್ಯತೆ ಅಂಗಡಿಯ ಮಾರಾಟದ ಸರಕಲ್ಲ. ಬ್ಯಾನರ್ ಮತ್ತು ತೋರಣಗಳ ಮೂಲಕ ಅದನ್ನು ಸ್ಥಾಪಿಸಲೂ ಸಾಧ್ಯವಾಗದು. ಕುತಂತ್ರ, ಷಡ್ಯಂತ್ರಗಳು ತುಂಬಿರುವ ಸ್ಥಳಗಳಲ್ಲಿ ಅವುಗಳಿಗೆ ಸ್ಥಾನವೂ ಲಭಿಸುವುದಿಲ್ಲ. ಹೃದಯಗಳ ಬೆಸಗು, ಮನಸ್ಸಿನ ಪ್ರೀತಿ, ಪರಸ್ಪರ ಸಹಿಷ್ಣುತೆ ಮತ್ತು ಸಹಬಾಳ್ವೆಯ ನೈಜ ಸಾಕಾರವಾಗಬೇಕಾದರೆ ಪವಿತ್ರ ಕುರ್‌ಆನ್ ಮತ್ತು ಪ್ರವಾದಿ(ﷺ) ಯವರ ಉಪದೇಶವನ್ನು ಮೈಗೂಡಿಸಿಕೊಳ್ಳುವುದು ಅನಿವಾರ್ಯ. ಅನ್ಯಥಾ ಅದು ಅಭಿನಯದ ಸಹಿಷ್ಣುತೆ ಮತ್ತು ಸಹಬಾಳ್ವೆಯಾಗುತ್ತದೆ.

ಧರ್ಮದ ಹೆಸರಲ್ಲಿ ಪ್ರತಿದಿನ ನಡೆಯುತ್ತಿರುವ ಅನಿಷ್ಟ ಘಟನೆಗಳು ರಾಷ್ಟ್ರದಲ್ಲಿ ನೆಲೆನಿಂತಿರುವ ಅಸಹಿಷ್ಣುತೆಯ ಆಳವನ್ನು ತಿಳಿಸುತ್ತದೆ. ಧರ್ಮವಿಶ್ವಾಸಿಗಳು ಮನುಷ್ಯರೆಂಬ ನೆಲೆಯಲ್ಲಿ ಪರಸ್ಪರರ ನಡುವೆ ಇಟ್ಟುಕೊಂಡಿದ್ದ ಸಂಬಂಧ ಮತ್ತು ಸಾಮರಸ್ಯದಲ್ಲಿ ದೊಡ್ಡ ಬಿರುಕು ಬಿಟ್ಟಿದೆ. ಪ್ರೀತಿ ಮತ್ತು ಶಾಂತಿಯ ತೊಟ್ಟಿಲಾಗಿದ್ದ ಹಲವಾರು ಧಾರ್ಮಿಕ ಸಮುದಾಯಗಳ ಹೂದೋಟವಾಗಿಯೂ ಗುರುತಿಸಲ್ಪಡುವ ನಮ್ಮ ರಾಷ್ಟ್ರದಲ್ಲಿ ವಿವಿಧ ಧಾರ್ಮಿಕ ವಿಭಾಗಗಳು ಪರಸ್ಪರ ವಿಶ್ವಾಸ ಮತ್ತು ಪ್ರೀತಿಯಿಂದ ಹೇಗೆ ಬದುಕಬೇಕೆಂದು ಪ್ರಾಯೋಗಿಕವಾಗಿ ತೋರಿಸಿಕೊಟ್ಟ ಭೂಮಿಯಾಗಿತ್ತು.

ಭಾರತದಲ್ಲಿ ಯಾವತ್ತೂ ಅಧಿಕೃತ ಧರ್ಮವಿರಲಿಲ್ಲ. ಬೇರೆ ಬೇರೆ ವಿಭಾಗಗಳು ಅವರ ವಿಶ್ವಾಸಗಳ ಆಚಾರ ಮತ್ತು ಅನುಷ್ಠಾನಗಳನ್ನು ನಿರ್ವಹಿಸಿಕೊಂಡು ಬರುತ್ತಿದ್ದರು. ಹಿಂದೂ ವಿಭಾಗಗಳ ನಡುವೆಯೇ ಸಕ್ರಿಯವಾಗಿ ನೆಲೆನಿಂತಿದ್ದ ಹಲವಾರು ಜಾತಿ, ಉಪಜಾತಿಗಳು ಅವರದ್ದೇ ಆದ ವಿಶ್ವಾಸ ಮತ್ತು ಸಂಪ್ರದಾಯಗಳನ್ನು ಮೈಗೂಡಿಸಿಕೊಂಡು ರಾಷ್ಟ್ರದಲ್ಲಿ ಜೀವಿಸಿದರು. ಪ್ರತಿಯೊಂದು ವಿಭಾಗದವರು ಅವರ ಆರಾಧನೆಗಾಗಿ ಮಂದಿರಗಳನ್ನು ನಿರ್ಮಿಸಿದರು.

ಕ್ರಿ.ಪೂ. ಭಾರತದಲ್ಲಿ ಅಸ್ತಿತ್ವದಲ್ಲಿ ಗುಪ್ತ, ಮೌರ್ಯ, ಚೋಳ, ಚೇರ, ಪಲ್ಲವ ರಾಜವಂಶದ ಕಾಲದಲ್ಲಾಗಲಿ, ದೆಹಲಿ ಸುಲ್ತಾನರು, ಮೊಗಲರು ಮುಂತಾದವರ ಕಾಲದಲ್ಲಾಗಲಿ, ಪೋರ್ಚುಗೀಸ್, ಡಚ್ಚ್, ಫ್ರೆಂಚ್, ಬ್ರಿಟಿಷರ ಕಾಲದಲ್ಲಾಗಲಿ ಧರ್ಮವು ದೊಡ್ಡ ಸಂಘರ್ಷ ಅಥವಾ ಅಸಹಿಷ್ಣುತೆಗೆ ಕಾರಣವಾಗಿರಲಿಲ್ಲ. ಪೋರ್ಚುಗೀಸರಿಂದ ಆರಂಭವಾದ ಯೂರೋಪಿಯನ್ ದಾಳಿಯು ರಾಷ್ಟ್ರದ ಬಹುಧರ್ಮೀಯ ಸ್ವರೂಪವನ್ನು ಶಿಥಿಲಗೊಳಿಸಿ ನಾಶಪಡಿಸಲಾರಂಭಿಸಿತು.

ಸಾಮ್ರಾಜ್ಯಶಾಹಿ ಶಕ್ತಿಗಳು 'ವಿಭಜಿಸಿ ಆಳು' ಎಂಬ ನಿಲುವಿನ ಮೂಲಕ ರಾಷ್ಟ್ರದ ಪ್ರಜೆಗಳೆಡೆಯಲ್ಲಿ ಧರ್ಮದ ಹೆಸರಲ್ಲಿ ಭಿನ್ನತೆಯನ್ನು ಮೂಡಿಸಿ ಪರಸ್ಪರ ಅವಿಶ್ವಾಸ ಹುಟ್ಟಿಸಲು ಪ್ರಯತ್ನಿಸಿದರು. ಭಾರತೀಯರ ಮೇಲೆ ದ್ವಿರಾಷ್ಟ್ರವಾದ ಹಾಗೂ ಹಿಂದುತ್ವ ವಾದವನ್ನು ಹೇರಿದ್ದು ದಾಳಿಕೋರ ಶಕ್ತಿಗಳಾಗಿದ್ದವು. ಇದು ಧರ್ಮದ ಹೆಸರಲ್ಲಿ ಅಸಹಿಷ್ಣುತೆ ಬೆಳೆಯಲು ಹಾಗೂ ಜನರ ನಡುವಿನ ಸಹಬಾಳ್ವೆ ನಾಶವಾಗಲು ಕಾರಣವಾಯಿತು.

ಭೂಮಿಯ ಯಾವ ಭಾಗದಲ್ಲಿ ವಾಸಿಸುತ್ತಿದ್ದರೂ ಭೂಮ್ಯಾಕಾಶಗಳು, ಮನುಷ್ಯರು ಸೇರಿದಂತೆ ಎಲ್ಲಾ ಜೀವಜಾಲಗಳ ಸೃಷ್ಟಿಕರ್ತನಾದ ಏಕನಾದ ದೇವನನ್ನು ಮಾತ್ರ ಆರಾಧಿಸಿ, ಅವನ ಆದೇಶಗಳಿಗೆ ಬದ್ಧವಾಗಿ ಜೀವಿಸುವುದು ಜನರಿಗೆ ಭೂಮಿಯಲ್ಲಿ ನಿರ್ವಹಿಸಬೇಕಾದ

ದೌತ್ಯವಾಗಿದೆ. ದೇವನ ಸೃಷ್ಟಿಗಳಾದ ಮನುಷ್ಯರು ದೇವ ಧರ್ಮವನ್ನು ಅಥವಾ ದೈವಿಕ ನಿರ್ದೇಶನಗಳ ಆಧಾರದಲ್ಲಿ ಪ್ರವಾದಿಗಳಿಂದ ಕಲಿಸಲ್ಪಟ್ಟ ವಿಶ್ವಾಸ ಸಂಹಿತೆ ಹಾಗೂ ಆಚಾರಾನುಷ್ಠಾನಗಳನ್ನು ಸ್ವೀಕರಿಸಿ ಸಹೋದರರಾಗಿ ಜೀವಿಸಬೇಕಾಗಿದೆ. ವಿವಿಧ ವರ್ಣಗಳು, ಭಾಷೆಗಳು ಮತ್ತು ಅಭಿರುಚಿಗಳಲ್ಲಿ ಭೂಮಿಯಲ್ಲಿ ಜೀವಿಸುತ್ತಿರುವ ಜನರು ಒಂದೇ ಮಾತಾಪಿತರ ಮಕ್ಕಳೆಂಬ ಕಾರ್ಯವನ್ನು ಸದಾ ನೆನಪಿಟ್ಟುಕೊಳ್ಳಬೇಕು.

ಸಮಸೃಷ್ಟಿಗಳಾದ ಸಹೋದರರನ್ನು ಪರಸ್ಪರ ಪ್ರೀತಿಸಿ ಮತ್ತು ಗೌರವಿಸಿ ಸೃಷ್ಟಿಕರ್ತನಿಗೆ ಸಂಪೂರ್ಣ ಸಮರ್ಪಣೆಗೈದು ಜೀವಿಸುವುದು ಮನುಷ್ಯನ ಜೀವನದ ನೆಲೆಯಾದ ಭೂಮಿಯಲ್ಲಿ ಅವನು ನಿರ್ವಹಿಸಲಿಕ್ಕಿರುವ ದೌತ್ಯ ಮತ್ತು ಕರ್ತವ್ಯವಾಗಿದೆ. ಹೀಗೆ ಜೀವಿಸಿದರೆ ಮಾತ್ರ ಅವನಿಗೆ ಮರಣಾನಂತರವಿರುವ ಶಾಶ್ವತ ಲೋಕದಲ್ಲಿ ಶಾಂತಿ, ಸಮಾಧಾನ ಹಾಗೂ ಸ್ವರ್ಗಾನುಭೂತಿಯೊಂದಿಗೆ ಬದುಕಲು ಸಾಧ್ಯವಾಗುತ್ತದೆ. ಪ್ರವಾದಿಗಳ ಮೂಲಕ ಕಲಿಸಲ್ಪಟ್ಟ ಈ ಸಂದೇಶವನ್ನು ಮೈಗೂಡಿಸಿಕೊಂಡಾಗ ಜನರಲ್ಲಿ ಪ್ರೀತಿ, ಸಹಬಾಳ್ವೆ, ಸಹಿಷ್ಣುತೆ ಬೆಳೆಯುತ್ತದೆ. ದೈವಿಕ ಧರ್ಮವು ಜಾತಿ, ಉಪಜಾತಿ, ಅಸ್ಪೃಶ್ಯತೆ, ಗುಲಾಮಗಿರಿಗಳಿಲ್ಲದೆ ಪ್ರೀತಿ, ಒಗ್ಗಟ್ಟು ಮುಂತಾದ ಪಾವನ ಆದರ್ಶಗಳ ಮೂಲಕ ಹೃದಯಗಳ ನಡುವೆ ಗಾಢವಾದ ಸಂಬಂಧವನ್ನು ಬೆಳೆಸಬೇಕೆಂದು ಹೇಳುತ್ತದೆ.

ಸೃಷ್ಟಿಕರ್ತನು ಮನುಷ್ಯನಿಗೆ ಶಾಂತಿ ಮತ್ತು ಸಮರ್ಪಣೆಯನ್ನೊಳಗೊಂಡ ನೈಜ ದೈವಿಕ ಧರ್ಮದಲ್ಲಿ ಅಚಲರಾಗಿ ನಿಲ್ಲಬೇಕೆಂದು ಉಪದೇಶಿಸುವಾಗ ಜನರಲ್ಲಿ ಹೆಚ್ಚಿನವರು ಅದರಿಂದ ಬಹುದೂರ ಸಂಚರಿಸಲು ಆಸಕ್ತರಾಗುತ್ತಾರೆ. ಅವರಲ್ಲಿ ಬಹುತೇಕ ಮಂದಿ ಸ್ವಂತವಾಗಿ ದೇವನನ್ನು ಸಂಕಲ್ಪಿಸಿಕೊಂಡು ಸೃಷ್ಟಿಕರ್ತನಾದ ನಿಜ ದೇವನಿಗೆ ಅರ್ಪಿಸಬೇಕಾದ ಆರಾಧನೆ, ವಿಧೇಯತೆ, ಅನುಸರಣೆಯನ್ನು ದೇವೇತರರಿಗೆ ಸಲ್ಲಿಸುವ ಮೂಲಕ ಕೃತಾರ್ಥರಾಗುತ್ತಾರೆ. ದೈವಿಕ ಗ್ರಂಥಗಳು ಜಗತ್ತಿನೊಂದಿಗೆ ಸೃಷ್ಟಿಕರ್ತನ ಸಾಮರ್ಥ್ಯದ ಕುರಿತು ಸ್ಪಷ್ಟವಾಗಿ ವಿವರಿಸಿ ಅವನ ಸಂದೇಶವನ್ನು ಸ್ವೀಕರಿಸಲು ಪ್ರೇರೇಪಿಸಿದೆ.

ಪ್ರಪಂಚದ ಪ್ರವೃತ್ತನೆಯ ರೀತಿ ಹಾಗೂ ಜೀವಿವರ್ಗಗಳ ಅದ್ಭುತ ಲೋಕಗಳ ಮೂಲಕ ಸೃಷ್ಟಿಕರ್ತನ ಮಹಾನತೆಯನ್ನು ಗುರುತಿಸಿ ಜೀವನವನ್ನು ಅವನಿಗೆ ಸಮರ್ಪಿಸಬೇಕೆಂದು ದೈವಿಕಗ್ರಂಥಗಳ ಆದೇಶವಾಗಿದೆ. ಆದರೆ ಮನುಷ್ಯನು ಪೈಶಾಚಿಕ ದುರ್ಬೋಧನೆಗಳೊಳಗಾಗಿ ತನ್ನ ಮನೋಭೂಮಿಕೆಯನ್ನು ಕಾಲ್ಪನಿಕ ದೇವರುಗಳನ್ನು ಸೃಷ್ಟಿಸಿ ಅವುಗಳಿಗೆ ಆರಾಧನೆಗಳನ್ನು ಅರ್ಪಿಸುತ್ತಾರೆ. ಜನರನ್ನು ಏಕೀಕರಿಸಬೇಕಾದ ಧರ್ಮದ ಹೆಸರಲ್ಲಿ ಅವರು ಧ್ರುವೀಕರಿಸಲ್ಪಡುತ್ತಿರುವುದನ್ನು ನಾವು ನೋಡುತ್ತಿದ್ದೇವೆ.

ಪ್ರವಾದಿಗಳು ಮತ್ತು ದೈವಿಕ ಗ್ರಂಥಗಳ ಮೂಲಕ ಸೃಷ್ಟಿಕರ್ತನ ಸಂದೇಶಗಳನ್ನು ಕಲಿಸಲ್ಪಡುತ್ತಿರುವಾಗ ಅದರ ಆಶಯಗಳನ್ನು ಮೈಗೂಡಿಸಿಕೊಳ್ಳುವ ಅಥವಾ ತಿರಸ್ಕರಿಸುವ ಪ್ರಾಕೃತಿಕ ವೈಶಿಷ್ಟ್ಯತೆಯನ್ನು ದೇವನು ಮನುಷ್ಯನಿಗೆ ನೀಡಿದ್ದಾನೆ. ದೈವಿಕಗ್ರಂಥವಾದ ಪವಿತ್ರ ಕುರ್‌ಆನ್ "ಇಷ್ಟವಿದ್ದವರು ಸ್ವೀಕರಿಸಲಿ. ಇಷ್ಟವಿದ್ದವರು ನಿರಾಕರಿಸಲಿ" ಎಂದು ಸ್ಪಷ್ಟಪಡಿಸಿದೆ. ಪವಿತ್ರ ಕುರ್‌ಆನ್ ವಿಶ್ವಾಸದ ಕಾರ್ಯದಲ್ಲಿ ಬಲಾತ್ಕಾರವಿಲ್ಲವೆಂದು ಹೇಳುವಾಗ ಧಾರ್ಮಿಕವಾದ ಸ್ವೀಕಾರ ಅಥವಾ ತಿರಸ್ಕಾರ ವ್ಯಕ್ತಿನಿಷ್ಠ ಕಾರ್ಯಗಳು ಮಾತ್ರವಾಗಿದೆಯೆಂದು ತಿಳಿಯಲು ಕಷ್ಟವಿಲ್ಲ. ಪ್ರತಿಯೊಬ್ಬರಿಗೂ ಅವರವರ ವಿಶ್ವಾಸ ಮತ್ತು ಅನುಷ್ಠಾನಕಾರ್ಯಗಳು ಪ್ರಿಯವಾಗಿರುತ್ತವೆ.

ಪ್ರವಾದಿ ಮುಹಮ್ಮದ್(ﷺ) ತಮ್ಮ ಚಿಕ್ಕಪ್ಪ ಅಬೂತಾಲಿಬರ ಇಸ್ಲಾಮ್ ಸ್ವೀಕಾರದ ಬಗ್ಗೆ ಬಹಳ ಆಸೆ ಇಟ್ಟುಕೊಂಡಿದ್ದರು. ಆದರೆ ಅಬೂತಾಲಿಬ್ ತಮ್ಮ ಅಂತಿಮ ಉಸಿರಿರುವ ತನಕ ಪರಂಪರಾಗತ ವಿಶ್ವಾಸದೊಂದಿಗೆ ಜೀವಿಸಿ ಮೃತಪಡುತ್ತೇನೆಂದು ಘೋಷಿಸಿದರು. ಪ್ರವಾದಿ(ﷺ) ಯವರು ಪ್ರವಾದಿತ್ವ ಪ್ರಾಪ್ತಿಯ ನಂತರ 13 ವರ್ಷಗಳ ಕಾಲ ಅಬೂತಾಲಿಬರ ಆಶ್ರಯದಲ್ಲಿ ಜೀವಿಸಿದ್ದರೂ ಅವರಿಬ್ಬರ ವಿಶ್ವಾಸದ ಮಧ್ಯೆ ಅಸಹಿಷ್ಣುತೆ ಮೊಳೆಯಲಿಲ್ಲವೆಂದು ಹೇಳುವಾಗ ಭಿನ್ನ ಧಾರ್ಮಿಕ ದೃಷ್ಟಿಕೋನ ಪರಸ್ಪರ ವೈರತ್ವ ಮತ್ತು ಅಸಹಿಷ್ಣುತೆಯನ್ನು ಬೆಳೆಸಲಿಕ್ಕಿರುವುದಲ್ಲವೆಂಬ ಉದಾತ್ತ ಸಂದೇಶವನ್ನು ನಾವಿಲ್ಲಿ ದರ್ಶಿಸಬಹುದಾಗಿದೆ.

ಪ್ರಚಲಿತ ಲೋಕದಲ್ಲಿ ಧರ್ಮವು ಕೇವಲ ಧ್ರುವೀಕರಣದ ಪರ್ಯಾಯವಾಗಿ ಮಾರ್ಪಟ್ಟಿದೆ. ಪರಸ್ಪರ ಪ್ರೀತಿಸಬೇಕಾದ ಜನರು ಧರ್ಮದ ಹೆಸರಲ್ಲಿಯೇ ಕಾದಾಡುತ್ತಿದ್ದಾರೆ. ವಾಸ್ತವದಲ್ಲಿ ಧರ್ಮ ಎಂಬ ಪದದ ಅರ್ಥ ಅಭಿಪ್ರಾಯ ಎಂದಾಗಿದೆ. ಒಬ್ಬನ ಅಭಿಪ್ರಾಯ ರೂಪುಗೊಳ್ಳುವುದು ಅವನ ಚಿಂತನೆ ಮತ್ತು ಮನಸ್ಸಿನಲ್ಲಾಗಿದೆ. ಒಬ್ಬನ ಧರ್ಮವು ಅವನ ಮನಸ್ಸಿನಲ್ಲಿ ದೃಢವಾಗಿ ಬೇರೂರಿದ ವಿಶ್ವಾಸ ಮತ್ತು ಆ ವಿಶ್ವಾಸಗಳೊಂದಿಗಿರುವ ಬದ್ಧತೆಯಿಂದಾಗಿ ಹುಟ್ಟು ಪ್ರವೃತ್ತನೆಗಳ ಒಟ್ಟು ಮೊತ್ತವಾಗಿದೆ.

ಧರ್ಮವನ್ನು ಒಬ್ಬ ವ್ಯಕ್ತಿಯ ಮನೋರಥ ಹಾಗೂ ಚಿಂತನೆಯ ಆಧಾರದಲ್ಲಿ ಅವರಿಗೆ ಸ್ವತಂತ್ರವಾಗಿ ಸ್ವೀಕರಿಸುವ ಅಥವಾ ನಿರಾಕರಿಸುವ ಸಂದೇಶವೆಂದು ಪರಿಗಣಿಸಬಹುದು. ಇಂದು ಮತಾಂತರದ ಕುರಿತು ದೊಡ್ಡ ಚರ್ಚೆ ನಡೆಯುವ ಕಾಲವಾಗಿದೆ.

ಒಬ್ಬ ತನ್ನ ಮನಸ್ಸಿನಲ್ಲಿ ರೂಪಿತವಾಗಿರುವ ವಿಶ್ವಾಸಕಾರ್ಯಗಳು ತಪ್ಪೆಂದು ಸ್ವಯಂ ಅರಿತಾಗ ಅದನ್ನು ತಿದ್ದುವ ಸ್ವಾತಂತ್ರ್ಯವು ಅವರ ಮೂಲಭೂತ ಹಕ್ಕುಗಳ ಪರಿಧಿಯಲ್ಲಿ ಬರುತ್ತದೆ. ಇಂತಹ ಅಭಿಪ್ರಾಯದ ಬದಲಾವಣೆಯನ್ನು ನಾವು ಧರ್ಮದ ಬದಲಾವಣೆ ಎನ್ನುವುದಕ್ಕಿಂತ ಮನ ಪರಿವರ್ತನೆಯಾಗಿ ನೋಡಬೇಕು.

ಇಸ್ಲಾಮ್ ಸ್ವೀಕರಿಸಿ ಮಕ್ಕಾದಿಂದ ಮದೀನಕ್ಕೆ ಆಗಮಿಸುತ್ತಿದ್ದ ಸ್ತ್ರೀಯರ ವಿಶ್ವಾಸವನ್ನು ಸರಿಯಾದ ರೂಪದಲ್ಲಿ ಪರಿಶೀಲಿಸಿ ಅದರ ಹಿನ್ನೆಲೆಯಲ್ಲಿ ಯಾವುದೇ ವೈಯುಕ್ತಿಕ ಹಿತಾಸಕ್ತಿ, ಭಯ, ಆಮಿಷವಿಲ್ಲದೆ ಮನಸ್ಸಿನಲ್ಲುಂಟಾದ ಅಭಿಪ್ರಾಯ ಬದಲಾವಣೆಯ ಆಧಾರದಲ್ಲಿ ಮಾತ್ರ ಅವರು ಇಸ್ಲಾಮ್ ಸ್ವೀಕರಿಸಿದ್ದಾರೆ ಎನ್ನುವುದನ್ನು ಖಾತರಿಪಡಿಸಿಕೊಳ್ಳಬೇಕೆಂಬ ನಿರ್ದೇಶನವು ಕುರ್ಆನಿನ ಮೂಲಕ ಪ್ರವಾದಿ (ﷺ) ಯವರಿಗೆ ನೀಡಲ್ಪಟ್ಟಿತ್ತು.

ಆದುದರಿಂದ ಇಸ್ಲಾಮಿನ ಮಟ್ಟಿಗೆ ಒಬ್ಬರ ಮಾನಸಿಕ ಪರಿವರ್ತನೆಯೇ ಧಾರ್ಮಿಕ ಪರಿವರ್ತನೆಯಾಗಿದೆ. ಬೆದರಿಕೆ ಅಥವಾ ಆಮಿಷದಿಂದ ಯಾರ ಮನಸ್ಸಿನಲ್ಲಿಯೂ ಪರಿವರ್ತನೆ ಸೃಷ್ಟಿಸಲು ಸಾಧ್ಯವಿಲ್ಲ. ಜನರ ಸೇವೆ, ವೈದ್ಯಕೀಯ ನೆರವು ಮತ್ತಿತರ ಕಲ್ಯಾಣ ಕಾರ್ಯಕ್ರಮಗಳನ್ನು ಕೆಲವು ಮಿಷನರಿಗಳು ಧರ್ಮ ಪರಿವರ್ತನೆಯ ಮಾರ್ಗವನ್ನಾಗಿ ಮಾಡಿಕೊಳ್ಳುತ್ತಾರೆ.

ಒಬ್ಬ ಮುಸ್ಲಿಮನ ಮಟ್ಟಿಗೆ ಹೇಳುವುದಾದರೆ ಅವನು ನಡೆಸುವ ಜನಸೇವೆ ಇತರರಿಗೆ ಆಮಿಷವೊಡ್ಡಿ ಮತಾಂತರಿಸುವ ಉದ್ದೇಶವನ್ನು ಹೊಂದಿದ್ದರೆ ಇಸ್ಲಾಮ್ ಅದನ್ನು ಅಂಗೀಕರಿಸುವುದಿಲ್ಲ. ಇಸ್ಲಾಮಿನಲ್ಲಿ ಒಬ್ಬನು ಮಾಡುವ ಉಪಕಾರದಲ್ಲಿ ಫಲಾನುಭವಿಗಳಿಂದ ಯಾವುದೇ ರೀತಿಯ ಪ್ರತ್ಯುಪಕಾರ, ಕೃತಜ್ಞತೆಯ ನಿರೀಕ್ಷೆ ಇರಬಾರದು. ಈ ಸೇವೆಯ ಉದ್ದೇಶ ಕೇವಲ ಅಲ್ಲಾಹನ ಸಂಪ್ರೀತಿ ಮಾತ್ರವಾಗಿರಬೇಕು.

ವಿಶ್ವಾಸ ಸ್ವಾತಂತ್ರ್ಯ ಹಾಗೂ ತನ್ನಿಚ್ಛೆಯ ಧರ್ಮವನ್ನು ಆರಿಸುವ ಸ್ವಾತಂತ್ರ್ಯವು ಭಾರತದ ಸಂವಿಧಾನವು ಪ್ರಜೆಗಳಿಗೆ ನೀಡುವ ಮೂಲಭೂತ ಹಕ್ಕುಗಳಲ್ಲಿ ಒಳಪಡುತ್ತದೆ. ಸಂವಿಧಾನದ 25ರಿಂದ 28ರ ತನಕವಿರುವ ವಿಧಿಯಲ್ಲಿ ಈ ಹಕ್ಕು ಪ್ರತಿಪಾದಿಸಲ್ಪಟ್ಟಿದೆ. ಮತಾಂತರ ಹಾಗೂ ಅಭಿಪ್ರಾಯ ರೂಪೀಕರಣದ ಕುರಿತು ಸದಾ ಭಯಪಡುತ್ತಿರುವ ಫ್ಯಾಸಿಸ್ಟರು ಭಾರತದಲ್ಲಿರುವ ಜನರು ಅನುಭವಿಸುತ್ತಿರುವ ಈ ಸ್ವಾತಂತ್ರ್ಯಕ್ಕೆ ಗೋರಿ ತೋಡಲು ಹಲವು ಕಾಲಗಳಿಂದ ನಿರಂತರವಾಗಿ ಪರಿಶ್ರಮಿಸುತ್ತಿದ್ದಾರೆ. ಇವರು ಮತಾಂತರ ನಿಷೇಧ ಕಾನೂನನ್ನು ಜಾರಿಗೆ ತರಲು ಪ್ರಯತ್ನಿಸಿದರೂ ರಾಷ್ಟ್ರದಾದ್ಯಂತ ಜಾರಿಗೊಳಿಸಲು ಈ ತನಕ ಸಾಧ್ಯವಾಗಿಲ್ಲ.

ಕಳೆದ ನವೆಂಬರ್ 8ರಂದು ರಾಜಸ್ಥಾನದ ಹೈಕೋರ್ಟ್‌ನಲ್ಲಿ ಒಬ್ಬ ವ್ಯಕ್ತಿಯ ಇಸ್ಲಾಮ್ ಧರ್ಮ ಸ್ವೀಕಾರಕ್ಕೆ ಸಂಬಂಧಪಟ್ಟಂತೆ ಹೇಬಿಯಸ್ ಕಾರ್ಪಸ್ ನೀಡಿದ ಪ್ರಕರಣದಲ್ಲಿ ಕೋರ್ಟ್ ವ್ಯಕ್ತಪಡಿಸಿದ ಅಭಿಪ್ರಾಯ ಬಹಳ ಪ್ರಸಕ್ತವಾಗಿದೆ. ರಾಷ್ಟ್ರದ ಸಂವಿಧಾನ ಪ್ರಕಾರ ಮತಾಂತರವಾಗುವ ಹಕ್ಕು ಪ್ರತಿಯೊಬ್ಬರಿಗಿದೆ ಎಂಬ ಹೈಕೋರ್ಟ್‌ನ ಹೇಳಿಕೆ ರಾಷ್ಟ್ರದಲ್ಲಿ ಮತಾಂತರ ಕಾನೂನು ಜಾರಿಗೊಳಿಸಬೇಕೆಂದು ಒತ್ತಾಯಿಸಿ ಅದರ ಹೆಸರಲ್ಲಿ ನಡೆಯುತ್ತಿರುವ ಫ್ಯಾಸಿಸ್ಟ್ ದಾಳಿಗಳಿಗೆ ಬಲವಾದ ತಿರುಗೇಟಾಗಿದೆ. ಧಾರ್ಮಿಕ ನಾಯಕತ್ವವು ಯಾವುದೇ ವ್ಯಕ್ತಿಗಳ ವಿಶ್ವಾಸ ಹಾಗೂ ಧರ್ಮಾಂತರವನ್ನು ಪ್ರಶ್ನಿಸದೆ ಅದನ್ನು ಸಹಿಷ್ಣುತೆಯಿಂದ ನೋಡಿ ಪರಸ್ಪರ ಸಹಬಾಳ್ವೆಯನ್ನು ಬಲಪಡಿಸಲು ಪ್ರಯತ್ನಿಸಬೇಕು.

ಇಲ್ಲಿ ಧಾರ್ಮಿಕ ನಾಯಕತ್ವವೂ ಬಿಕ್ಕಟ್ಟಿಗೆ ಸಿಲುಕುತ್ತದೆ. ರಾಷ್ಟ್ರದ ಸಾಮಾಜಿಕ ರಚನೆಯನ್ನು ಪರಿಸ್ಥಿತಿಯನ್ನು ತಿಳಿದುಕೊಳ್ಳದೆ ರಾಷ್ಟ್ರದ ಆಂತರಿಕ ಭದ್ರತೆಗೆ ಸವಾಲಾಗುವ ರೀತಿಯಲ್ಲಿ ಧರ್ಮವನ್ನು ವಿಕೃತಗೊಳಿಸಿ ಜನರ ನಡುವೆ ವೈಷಮ್ಯ ಮತ್ತು ಸಂಘರ್ಷವನ್ನು ಹುಟ್ಟು ಹಾಕುವ ರೀತಿಯಲ್ಲಿ ಕೋಮುವಾದಿಗಳನ್ನು ತಡೆಯುವ ಇಚ್ಛಾಶಕ್ತಿಯನ್ನು ಧಾರ್ಮಿಕ ಸಂಘಟನೆಗಳು ಬೆಳೆಸಿಕೊಳ್ಳಬೇಕಾಗಿತ್ತು. ಆದರೆ ಇವುಗಳ ಮುಂಚೂಣಿ ನಾಯಕತ್ವದಲ್ಲಿ ಅವಿವೇಕಿಗಳ ರಂಗಪ್ರವೇಶವಾಗಿರುವುದು ಧಾರ್ಮಿಕ ಸಂಘಟನೆಗಳು ಎದುರಿಸುವ ದೊಡ್ಡ ಸಮಸ್ಯೆಯಾಗಿದೆ. ಸೃಷ್ಟಿಕರ್ತನ ಸಂದೇಶಗಳ ಪ್ರಚಾರದ ಜವಾಬ್ದಾರಿಯನ್ನು ಹೊತ್ತುಕೊಂಡಿರುವ ಮುಸ್ಲಿಂ ಸಂಘಟನೆಗಳು ಪ್ರವಾದಿ(ﷺ) ಯವರ ವರ್ತನೆಯ ಶಿಷ್ಟಾಚಾರ ಹಾಗೂ ಸಹಿಷ್ಣುತೆಯನ್ನು ಕಲಿತು ಅದನ್ನು ಜೀವನದಲ್ಲಿ ಕಟ್ಟುನಿಟ್ಟಾಗಿ ಪಾಲಿಸಬೇಕು.

ಕುಟುಂಬ, ಸಮುದಾಯ, ಸಂಘಟನೆ, ಸ್ಥಾಪನೆ ಮುಂತಾದವುಗಳನ್ನು ಸಕ್ರಿಯಗೊಳಿಸಬೇಕಾದ ಹಂತಗಳಲ್ಲಿ ನಾಯಕತ್ವದಲ್ಲಿ ಮೂಡುವ ಬಿರುಕು ಅವುಗಳಲ್ಲಿ ಅರಾಜಕತೆಯನ್ನು ಸೃಷ್ಟಿಸುತ್ತದೆ. ಒಂದು ಕುಟುಂಬದಲ್ಲಿ ಉಂಟಾಗುವ ಭಿನ್ನಾಭಿಪ್ರಾಯಗಳಲ್ಲಿ ಕುಟುಂಬದ ಮುಖ್ಯಸ್ಥರಾದ ತಂದೆ ಅಥವಾ ತಾಯಿ ಯಾವುದಾದರೂ ಒಂದು ಪಂಗಡದ ಪರ ನಿಂತರೆ ಅಲ್ಲಿ ಅಭದ್ರತಾವಸ್ಥೆ ಸಂಜಾತವಾಗುತ್ತದೆ. ಮಾತುಗಳು ಹರಿತಗೊಂಡು ಕುಟುಂಬವು ಛಿನ್ನಭಿನ್ನವಾಗುತ್ತದೆ.

ಸಂಘಟನೆಗಳು ಮತ್ತು ಸ್ಥಾಪನೆಗಳಲ್ಲಿ ಮೂಡುವ

ಭಿನ್ನಾಭಿಪ್ರಾಯಗಳನ್ನು ಬಗೆಹರಿಸಲು ಸಹಿಷ್ಣುತೆ ಹಾಗೂ ಸಹಬಾಳ್ವೆಯನ್ನು ಉಪದೇಶಿಸುವುದು ನಾಯಕತ್ವದ ಅತ್ಯಂತ ದೊಡ್ಡ ಬಾಧ್ಯತೆಯಾಗಿದೆ. ನಾಯಕತ್ವವೇ ಒಂದು ಪಂಗಡದಲ್ಲಿ ಗುರುತಿಸಿಕೊಂಡು ಏಕಪಕ್ಷೀಯ ನಿಲುವು ಸ್ವೀಕರಿಸುವಾಗ ಅನುಯಾಯಿಗಳಲ್ಲಿ ನಾಯಕತ್ವದ ಕುರಿತು ಅವಿಶ್ವಾಸ ರೂಪುಗೊಳ್ಳುತ್ತದೆ. ಕೆಲವೊಮ್ಮೆ ಪೀಳಿಗೆಗಳ ನಡುವಿನ ಅಂತರವು ಜನರೇಶನ್ ಗ್ಯಾಪ್ ಸಮಸ್ಯೆಗಳನ್ನು ಸೃಷ್ಟಿಸುತ್ತದೆ. ಸಂಘಟನೆಗಳಲ್ಲಿ ಮತ್ತು ಕುಟುಂಬಗಳಲ್ಲಿ ಪ್ರಾಯದ ವ್ಯತ್ಯಾಸವನ್ನು ಪರಿಗಣಿಸದಿರುವುದು ಯಾವತ್ತೂ ಸರಿಯಲ್ಲ. ಹಿರಿಯರನ್ನು ಗೌರವಿಸದವನು ಮತ್ತು ಕಿರಿಯರನ್ನು ಪ್ರೀತಿಸದವನು ನಮಗೆ ಸೇರಿದವನಲ್ಲ ಎಂಬ ಪ್ರವಾದಿವಚನವು ಜನರೇಶನ್ ಗ್ಯಾಪ್ ಸೃಷ್ಟಿಸುವ ಸಮಸ್ಯೆಗಳನ್ನು ಹೇಗೆ ಬಗೆಹರಿಸಬೇಕೆಂದು ತಿಳಿಸಿಕೊಡುತ್ತದೆ.

ಜ್ಞಾನ, ಸಂಪತ್ತು, ಆರೋಗ್ಯ ಮುಂತಾದ ಹಲವು ರಂಗಗಳಲ್ಲಿ ನಾವು ಸ್ಪರ್ಧಿಸಬಹುದು. ಆದರೆ ಪ್ರಾಯದೊಂದಿಗೆ ಸ್ಪರ್ಧಿಸಲು ನಮ್ಮಿಂದಾಗದು. ಹಿರಿಯರು ಅನುಭವದಿಂದ ಪಡೆದ ಪರಿಜ್ಞಾನವು ಎಷ್ಟು ಡಿಗ್ರಿಯನ್ನು ಸಂಪಾದಿಸಿದರೂ ಲಭ್ಯವಾಗದು.

ವಾರ್ಧಕ್ಯಕ್ಕೆ ತಲುಪಿದಾಗ ಅವರಿಗೆ ಇನ್ನು ಮುಂದೆ ಸಂಘಟನೆಗಳ ನೇತೃತ್ವವನ್ನು ವಹಿಸಲು ಸಾಧ್ಯವಾಗದು ಎಂಬ ದೃಷ್ಟಿಕೋನವನ್ನು ತಿದ್ದಿಕೊಳ್ಳಬೇಕು. ಹಿರಿಯರನ್ನು ಗೌರವಿಸಬೇಕೆಂಬ ಪ್ರವಾದಿವಚನವು ಇಲ್ಲಿ ಪ್ರಸಕ್ತವಾಗಿದೆ. ಧರ್ಮ ಬೇಧವಿಲ್ಲದೆ ಹಿರಿಯರೊಂದಿಗೆ ಪ್ರವಾದಿ (ﷺ) ಯವರು ತೋರಿಸಿದ ಗೌರವ ಚರಿತ್ರೆಯಲ್ಲಿ ಧಾರಾಳವಿದೆ.

ಕಿರಿಯರೊಂದಿಗಿನ ಪ್ರೀತಿ ಅದರ ಮತ್ತೊಂದು ಮುಖವಾಗಿದೆ. ಪ್ರೀತಿಯ ಪರಿಗಣನೆ ಯುವ ಸಮೂಹದ ಬೇಡಿಕೆಯಾಗಿದೆ. ಸದುಪದೇಶಗಳ ಮೂಲಕ ಯುವ ಸಮುದಾಯವು ತಮ್ಮ ಕುಂದುಕೊರತೆಗಳನ್ನು ತಿದ್ದಿಕೊಂಡು ಸತ್ಪಥವನ್ನು ಅನುಸರಿಸುತ್ತದೆ ಎನ್ನುವುದಕ್ಕೆ ಪ್ರವಾದಿ(ﷺ) ಯವರ ಜೀವನದಲ್ಲಿ ಅದೆಷ್ಟೋ ಉದಾಹರಣೆಗಳಿವೆ. ಸಮಾಲೋಚನೆಯಲ್ಲಿ ಪ್ರವಾದಿ(ﷺ) ಯವರು ಯುವ ಸಮುದಾಯಕ್ಕೆ ನೀಡಿದ ಪ್ರಾಶಸ್ತ್ಯ ಧಾರಾಳವಿದೆ. ಅವರಲ್ಲಿ ಕೆಡುಕುಗಳು ಕಂಡಾಗ ಅಧಿಕಾರದ ದಂಡವನ್ನು ಉಪಯೋಗಿಸಿ ಕ್ರಮ ತೆಗೆದುಕೊಳ್ಳಬಾರದು. ಬದಲಾಗಿ ಅವರು ಆ ಕೆಡುಕು ಅಥವಾ ತಪ್ಪುಗಳನ್ನು ಸ್ವಯಂ ತಿದ್ದಿಕೊಳ್ಳುವ ಮಾನಸಿಕ ಸ್ಥಿತಯೆಡೆಗೆ ಕೊಂಡೊಯ್ಯಲು ಪ್ರೇರೇಪಿಸಬೇಕು.

ಪ್ರವಾದಿ(ﷺ) ಯವರು ಒಬ್ಬಳು ಸ್ತ್ರೀಯೊಂದಿಗೆ ಮಾತನಾಡುತ್ತಿದ್ದಾಗ ಅದನ್ನು ನೋಡುತ್ತಿದ್ದ ಅನುಚರರೊಂದಿಗೆ ಅದು ತನ್ನ ಪತ್ನಿ ಸಫಿಯ್ಯ ಎಂದು ಹೇಳುವ ವೈಶಾಲ್ಯತೆಯನ್ನು ತೋರಿಸಿದ್ದರು. ಉಹುದ್ ಯುದ್ಧಕ್ಕೆ ಸಂಬಂಧಪಟ್ಟಂತೆ ನಡೆದ ಚರ್ಚೆಯಲ್ಲಿ ಯುವಕರ ಅಭಿಪ್ರಾಯ ಬಹುಮತ ಪಡೆದಾಗ ಪ್ರವಾದಿ(ﷺ) ಯವರು ತಮ್ಮ ಅಭಿಪ್ರಾಯವನ್ನು ಬದಲಿಸಿ ಯುವಕರ ಅಭಿಪ್ರಾಯವನ್ನು ಸ್ವೀಕರಿಸಿದ್ದು ಪ್ರವಾದಿ(ﷺ) ಯವರ ಸಹಿಷ್ಣುತೆ ಮತ್ತು ಸಹಬಾಳ್ವೆಯ ಹಲವಾರು ಉದಾಹರಣೆಗಳಲ್ಲಿ ಒಂದು ಮಾತ್ರ.

ಪ್ರೀತಿಯನ್ನು ಕೊಟ್ಟು ಗೌರವವನ್ನು ಪಡೆಯಿರಿ. ಗೌರವ ಕೊಟ್ಟು ಪ್ರೀತಿಯನ್ನು ಪಡೆಯಿರಿ. ಪ್ರೀತಿ ಮತ್ತು ಗೌರವ ಪರಸ್ಪರ ಪೂರಕವಾಗಿದೆಯೆಂದು ನಾಯಕತ್ವ ಹಾಗೂ ಅನುಯಾಯಿಗಳು ತಿಳಿದಿರಬೇಕು.

ನಾಯಕತ್ವದಲ್ಲಿ ಆವರಿಸಿಕೊಳ್ಳುವ ಶೂನ್ಯತೆಯು ಒಂದು ಸಮುದಾಯದ ವಿನಾಶಕ್ಕೆ ಕಾರಣವಾಗುತ್ತದೆ. ಮನಸ್ಸಿನ ಅಂತರಾಳದಲ್ಲಿರುವ ಆತ್ಮಾರ್ಥತೆ ಮತ್ತು ಪ್ರೀತಿ ಮಾತ್ರ ಒಬ್ಬನನ್ನು ಯಶಸ್ವಿ ನಾಯಕನಾಗಿ ಬೆಳೆಸಬಲ್ಲದು.

ಪರಸ್ಪರ ಛಿನ್ನಭಿನ್ನವಾಗಿ ತಮ್ಮಲ್ಲಿ ಹೊಡಿದಾಡಿಕೊಂಡಿದ್ದ ಅರಬ್ ಗೋತ್ರಗಳನ್ನು ಪ್ರವಾದಿ(ﷺ) ಯವರಿಗೆ ಒಂದೇ ದಾರದ ಮಣಿಗಳಂತೆ ಪೋಣಿಸಲು ಸಾಧ್ಯವಾದದ್ದು ಅಲ್ಲಾಹನ ಅನುಗ್ರಹದಿಂದ ಮಾತ್ರವಾಗಿತ್ತು. ಸಮುದಾಯ ಮತ್ತು ಅನುಯಾಯಿಗಳೊಂದಿಗೆ ಅವರಿಗಿದ್ದ ಆರ್ದ್ರತೆ ಎಂತಹ ಕಠಿಣ ಹೃದಯಿಗಳನ್ನು ಕೂಡಾ ಅವರಿಗೆ ನಿಕಟಗೊಳಿಸಿತು. ಪ್ರವಾದಿ(ﷺ) ಯವರ ಕುರಿತು ಪವಿತ್ರ ಕುರ್‌ಆನ್ ಹೀಗೆನ್ನುತ್ತದೆ:

﴿ فَبِمَا رَحْمَةٍ مِّنَ ٱللَّهِ لِنتَ لَهُمْ ۖ وَلَوْ كُنتَ فَظًّا
غَلِيظَ ٱلْقَلْبِ لَٱنفَضُّوا۟ مِنْ حَوْلِكَ ۖ فَٱعْفُ عَنْهُمْ
وَٱسْتَغْفِرْ لَهُمْ وَشَاوِرْهُمْ فِى ٱلْأَمْرِ ۖ فَإِذَا عَزَمْتَ
فَتَوَكَّلْ عَلَى ٱللَّهِ ۚ إِنَّ ٱللَّهَ يُحِبُّ ٱلْمُتَوَكِّلِينَ ١٥٩ ﴾

"ನೀವು ಅವರ ಪಾಲಿಗೆ ಅತ್ಯಂತ ಸೌಮ್ಯ ಸ್ವಭಾವಿಯಾಗಿರುವುದು ಅಲ್ಲಾಹನ ಮಹಾ ಕೃಪೆಯಾಗಿದೆ. ನೀವು ಕಠಿಣ ಸ್ವಭಾವಿ ಮತ್ತು ಕಲ್ಲೆದೆಯವರಾಗಿರುತ್ತಿದ್ದರೆ ಇವರೆಲ್ಲರೂ ನಿಮ್ಮ ಸುತ್ತಮುತ್ತಲಿನಿಂದ ಚದುರಿ ಹೋಗುತ್ತಿದ್ದರು. ಇವರ ಪ್ರಮಾದಗಳನ್ನು ಕ್ಷಮಿಸಿರಿ. ಇವರ ಪಾಪವಿಮೋಚನೆಗಾಗಿ ಪ್ರಾರ್ಥಿಸಿರಿ. ಮತ್ತು ಧರ್ಮದ ಕೆಲಸಗಳಲ್ಲಿ ಇವರೊಡನೆ ಸಮಾಲೋಚಿಸಿರಿ. ಆ ಬಳಿಕ ಯಾವುದಾದರೊಂದು ಅಭಿಪ್ರಾಯದಲ್ಲಿ ನೀವು ದೃಢ ನಿರ್ಧಾರ ತಾಳಿದರೆ ಅಲ್ಲಾಹನ ಮೇಲೆ

ಭರವಸೆಯಿಡಿರಿ. ಅಲ್ಲಾಹನ ಮೇಲೆ ಭರವಸೆಯಿಟ್ಟು ಕಾರ್ಯವೆಸಗುವವರನ್ನು ಅವನು ಪ್ರೀತಿಸುತ್ತಾನೆ.” (ಕುರ್‌ಆನ್ 3:159)

ಕರುಣೆ ಮತ್ತು ಸೌಮ್ಯತೆ ಅಂಗಡಿಯ ಮಾರಾಟದ ಸರಕಲ್ಲ. ಬ್ಯಾನರ್ ಮತ್ತು ತೋರಣಗಳ ಮೂಲಕ ಅದನ್ನು ಸ್ಥಾಪಿಸಲೂ ಸಾಧ್ಯವಾಗದು. ಕುತಂತ್ರ, ಷಡ್ಯಂತ್ರಗಳು ತುಂಬಿರುವ ಸ್ಥಳಗಳಲ್ಲಿ ಅವುಗಳಿಗೆ ಸ್ಥಾನವೂ ಲಭಿಸುವುದಿಲ್ಲ. ಹೃದಯಗಳ ಬೆಸುಗು, ಮನಸ್ಸಿನ ಪ್ರೀತಿ, ಪರಸ್ಪರ ಸಹಿಷ್ಣುತೆ ಮತ್ತು ಸಹಬಾಳ್ವೆಯ ನೈಜ ಸಾಕಾರವಾಗಬೇಕಾದರೆ ಪವಿತ್ರ ಕುರ್‌ಆನ್ ಮತ್ತು ಪ್ರವಾದಿ(ﷺ) ಯವರ ಉಪದೇಶವನ್ನು ಮೈಗೂಡಿಸಿಕೊಳ್ಳುವುದು ಅನಿವಾರ್ಯ. ಅನ್ಯಥಾ ಅದು ಅಭಿನಯದ ಸಹಿಷ್ಣುತೆ ಮತ್ತು ಸಹಬಾಳ್ವೆಯಾಗುತ್ತದೆ. ■

---

18 ನೇ ಪುಟದಿಂದ

## ಅಂತ್ಯದಿನದ ಚಿಹ್ನೆಗಳು

ಅವಿವೇಕಿಗಳನ್ನು ನಾಯಕರನ್ನಾಗಿ ಮಾಡಿಕೊಳ್ಳುವರು. ನಂತರ ಅವರೊಂದಿಗೆ ಫತ್ವಾ ಕೇಳುವರು. ಅವರು ಯಾವುದೇ ಜ್ಞಾನವಿಲ್ಲದೆ ಫತ್ವಾ ನೀಡುವರು. ಹೀಗೆ ಅವರು ಸ್ವಯಂ ಪಥಭ್ರಷ್ಟರಾಗುವುದಲ್ಲದೆ ಜನರನ್ನೂ ಪಥಭ್ರಷ್ಟಗೊಳಿಸುವರು.”

ಇಮಾಂ ಅಶ್ಯಅ್‌ಬೀ ಹೇಳುತ್ತಾರೆ:

لَا تَقُومُ السَّاعَةُ حَتَّى يَصِيرَ الْعِلْمُ جَهْلًا وَالْجَهْلُ عِلْمًا.

“ಜ್ಞಾನವನ್ನು ಅಜ್ಞಾನವೆಂದು ಮತ್ತು ಅಜ್ಞಾನವನ್ನು ಜ್ಞಾನವೆಂದು ಪರಿಗಣಿಸಲ್ಪಡುವ ತನಕ ಅಂತ್ಯದಿನ ಸಂಭವಿಸುವುದಿಲ್ಲ.”

ಇವೆಲ್ಲವೂ ವಸ್ತುಸ್ಥಿತಿಗಳು ತಲೆಕೆಳಗಾಗುವ ಕೆಲವು ಉದಾಹರಣೆಗಳಾಗಿವೆ.

ಅಲ್‌ಹಾಕಿಮ್‌ರವರ ಸಹೀಹ್‌ನಲ್ಲಿರುವ ಅಬ್ದುಲ್ಲಾಹ್ ಇಬ್ನ್ ಅಮ್ರ್ (ؓ) ರವರ ಹದೀಸಿನಲ್ಲಿ ಪ್ರವಾದಿ(ﷺ) ಯವರು ಹೇಳುತ್ತಾರೆ:

«إِنَّ مِنْ أَشْرَاطِ السَّاعَةِ أَنْ يُوضَعَ الْأَخْيَارُ وَيُرْفَعَ الْأَشْرَارُ».

“ಸಜ್ಜನರನ್ನು ಕೀಳಾಗಿ ಕಾಣುವುದು ಮತ್ತು ದುರುಳರನ್ನು ಮೇಲಾಗಿ ಕಾಣುವುದು ಅಂತ್ಯದಿನದ ಚಿಹ್ನೆಯಾಗಿದೆ.”

[ಜಾಮಿಉಲ್ ಉಲೂಮಿ ವಲ್ ಹಿಕಮ್ ಎಂಬ ಗ್ರಂಥದಿಂದ] ■

---

27 ನೇ ಪುಟದಿಂದ

## ಶಿಯಾಗಳು ಮತ್ತು ತೌಹೀದ್

ಜಅ್‌ಫರ್‌ರವರೊಂದಿಗೆ, ಸಮುದ್ರ ಮತ್ತು ಬಿರುಗಾಳಿಯಿಂದ ರಕ್ಷಣೆ ಪಡೆಯಲು ಇಬ್ನ್ ಮೂಸಾರೊಂದಿಗೆ, ಅಲ್ಲಾಹನ ಬಳಿಯಿಂದ ಜೀವನಾಧಾರ ಇಳಿಯಲು ಮುಹಮ್ಮದ್ ಬಿನ್ ಅಲಿಯ್ಯ್ ರೊಂದಿಗೆ, ನಾಫಿಲತ್‌ಗಳು ಹಾಗೂ ಸಹೋದರರಿಗೆ ಪುಣ್ಯ ಲಭಿಸಲು ಹಾಗೂ ಅಲ್ಲಾಹನ ಭಯವಿರಿಸಿಕೊಳ್ಳಬೇಕೆಂದು ಆಗ್ರಹಿಸುವವರು ಇಬ್ನ್ ಮುಹಮ್ಮದ್ ರೊಂದಿಗೆ, ಪರಲೋಕ ಹಿತಕ್ಕಾಗಿ ಇಬ್ನ್ ಅಲಿಯ್ಯ್ ರೊಂದಿಗೆ ಸಹಾಯ ಯಾಚಿಸಿರಿ. ಖಡ್ಗವು ನಿಮ್ಮನ್ನು ಬಲಿ ತೆಗೆದುಕೊಳ್ಳಲು ಅಣಿಯಾದಾಗ ಸ್ವಾಹಿಬುಝ್ಝುಮಾನ್ ರೊಂದಿಗೆ ಸಹಾಯ ಅಪೇಕ್ಷಿಸಿರಿ. ಏಕೆಂದರೆ ಅವರು ನಿಮಗೆ ಸಹಾಯ ಮಾಡುತ್ತಾರೆ.” (ಬಿಹಾರುಲ್ ಅನ್ವಾರ್ ಸಂಪುಟ 33 ಪುಟ 94)

ಖುಮೈನಿ ಬರೆಯುತ್ತಾರೆ:

“ಶಿಫಾ ಪಡೆಯಲು ನಮ್ಮ ಸಯ್ಯಿದ್ ಆದ ಹುಸೈನ್ ರವರ ಮಣ್ಣನ್ನು ಹೊರತುಪಡಿಸಿ ಬೇರೆ ಯಾವುದೇ ಮಣ್ಣನ್ನು ಉಪಯೋಗಿಸಬಾರದು. ಇತರ ಮಣ್ಣಿನೊಂದಿಗೆ ಅದನ್ನು ಸೇರಿಸಿ ತಿನ್ನುವುದು ಅನುವದನೀಯವಲ್ಲ. ಕಡಲೆ ಕಾಳಿಗಿಂತ ದೊಡ್ಡ ಮಣ್ಣಿನ ಉಂಡೆಯನ್ನು ತಿನ್ನಬಾರದು. ಇತರ ಕಬ್ರ್‌ಗಳ ಮಣ್ಣನ್ನು ಹುಸೈನ್‌ರ ಕಬ್ರ್‌ನ ಮಣ್ಣಿಗೆ ಸೇರಿಸಬಾರದು. ಮಾತ್ರವಲ್ಲದೆ, ಪ್ರವಾದಿಗಳು ಮತ್ತು ಇಮಾಮರುಗಳ ಕಬ್ರ್‌ಗಳ ಮಣ್ಣನ್ನು ಸಹ ಅದರ ಜೊತೆ ಸೇರಿಸುವುದು ಅನುವದನೀಯವಲ್ಲ.” (ತಹ್ರೀರುಲ್ ವಸೀಲ ಸಂಪುಟ 1 ಪುಟ 64) ■